# ಡಾ. ಫ. ಗು. ಹಳಕಟ್ಟಿಯವರ
# ಶಿವಾನುಭವ ಪತ್ರಿಕೆಯ ಲೇಖನಸೂಚಿ

ಡಾ. ಎಸ್. ಆರ್. ಗುಂಜಾಳ







ಬಿ. ಎಲ್. ಡಿ. ಇ. ಸಂಸ್ಥೆ, ವಿಜಾಪುರ

। ಶ್ರೀಗುರು ।

೨೧೦೦೦೦೦೦ ಲಕ್ಷ ತಾಡೋಲೆ ಸಂಗ್ರಹಕಾರ
ರಾದ ಶ್ರೀ ಅಶೋಕ ದೊಮ್ಮಲೂರ, ಬೆಂಗಳೂರು
ಅವರಿಗೆ
ಅತ್ಯಂತ ಪ್ರೀತಿ ಗೌರವಗಳಿಂದ ಕೊಟ್ಟ ಉಡುಗೊರೆ

ಎಸ್.ಆರ್. ಗುಂಜಾಳ

Dr. S. R. GUNJAL
M.A.M.Lib.Sc.Ph.D
2nd Floor, Santubai Apartment, Court Road,
Line Bazar, Dharwad-580001
Mob: 9148174744

ಡಾ. ಫ. ಗು. ಹಳಕಟ್ಟಿಯವರ

# ಶಿವಾನುಭವ ಪತ್ರಿಕೆಯ ಲೇಖನಸೂಚಿ

(ಫೆಬ್ರುವರಿ ೧೯೨೬ – ಫೆಬ್ರುವರಿ ೧೯೬೧)

ಡಾ. ಎಸ್. ಆರ್. ಗುಂಜಾಳ



ಪ್ರಕಾಶಕರು
ಬಿ. ಎಲ್. ಡಿ. ಇ. ಸಂಸ್ಥೆ, ವಿಜಾಪುರ
೨೦೦೨

*INDEX OF ARTICLES APPEARED IN 'SHIVANUBHAVA' OF DR. P. G. HALAKATTI,* BIJAPUR. Prepared by Dr. S. R. Gunjal, Director, Central Research Library of Lingayat Studies, Naganur Sri Rudraximath, Belgaum–590 010. Published by : B.L.D.E. Association, BIJAPUR.

Pages xxxii+೧೯೨



First Impression : 2002

Price : Rs. 100/–

ಮುದ್ರಣ

ಫ. ಶಿ. ಭಾಂಡಗೆ

ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್

ಕಾಗದಗೇರಿ ಓಣಿ, ಗದಗ-೫೮೨ ೧೦೧.

✆ ೦೮೩೭೨–೫೩೭೫೨೨, ೫೩೫೫೦೯ (O), ೫೩೭೫೭೮ (R)

# ಮುನ್ನುಡಿ

ಇಪ್ಪತ್ತನೇ ಶತಮಾನದ ಪೂರ್ವಾರ್ಧ ವೀರಶೈವದ ಪುನರುತ್ಥಾನದ ಕಾಲ. ಶಿರಸಂಗಿ ಲಿಂಗರಾಜ ದೇಸಾಯಿ, ಅರಟಾಳ ರುದ್ರಗೌಡರು, ಹರ್ಡೇಕರ ಮಂಜಪ್ಪ, ಶಿ.ಶಿ. ಬಸವನಾಳ, ಫ.ಗು. ಹಳಕಟ್ಟಿ ಮೊದಲಾದ ಅನೇಕ ಸಮಾಜ ಚಿಂತಕರು ಈ ಅವಧಿಯಲ್ಲಿ ಸರ್ವಾರ್ಪಣ ಮನೋಭಾವದಿಂದ ಸಮಾಜಾಭಿವೃದ್ಧಿಗಾಗಿ ಹಗಲಿರುಳೂ ದುಡಿದರು. ಇದೊಂದು ಅಪೂರ್ವ ಸಾಮಾಜಿಕ ಚಳುವಳಿ. ಈ ಚಳುವಳಿಯ ನೇತೃತ್ವವನ್ನು ವಹಿಸಿದವರು ಕಾರಣಿಕ ಯುಗಪುರುಷರಾದ ಲಿಂ. ಹಾನಗಲ್ಲ ಕುಮಾರ ಸ್ವಾಮಿಗಳು. ಅವರು ಆ ಕಾಲದ ಸಮಾಜ ಹಿತಚಿಂತಕರಿಗೆ ಆಶ್ರಯದಾತರಾಗಿದ್ದರು. ಅವರ ಪ್ರೇರಣೆ ಪ್ರೋತ್ಸಾಹದ ಫಲವಾಗಿ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಹಿತ್ಯಕ ಕ್ಷೇತ್ರಗಳಲ್ಲಿ ಗಣನೀಯ ಅಭಿವೃದ್ಧಿ ಸಾಧ್ಯವಾಯಿತು. ಈ ಕಾಲದ ವೀರಶೈವೇತಿಹಾಸದಲ್ಲಿ ಡಾ. ಫ.ಗು. ಹಳಕಟ್ಟಿಯವರ ಸಾಧನೆ ಅವಿಸ್ಮರಣೀಯವಾದುದು.

'ವಚನ ಪಿತಾಮಹ'ರೆಂದೇ ಖ್ಯಾತರಾದ ಡಾ. ಫ.ಗು. ಹಳಕಟ್ಟಿ ಅವರು ಸಮಾಜದ ವಿವಿಧ ರಂಗಗಳಲ್ಲಿ ಬಿಡುವಿಲ್ಲದೆ ದುಡಿದವರು. ಸದ್ದಿಲ್ಲದೆ ಕೆಲಸ ಮಾಡಿದವರು. ನಾಡು-ನುಡಿಗಾಗಿ ದೇಹ ಸವೆಸಿದ ಅವರು ನಾವೆಂದೂ ಮರೆಯಲಾಗದ ವ್ಯಕ್ತಿ. ಅವರ ಅವಿರತ ಪರಿಶ್ರಮದ ಫಲವಾಗಿ ಹಲವಾರು ಶಿಕ್ಷಣ ಸಂಸ್ಥೆಗಳು ಮೈದಾಳಿದವು ; ವಚನ ಸಾಹಿತ್ಯ ಬೆಳಕು ಕಾಣುವಂತಾಯಿತು. ಬಸವಾದಿ ಶರಣರ ಈ ಅಪೂರ್ವ ವಚನ ಸಾಹಿತ್ಯ ಹಾಗೂ ವೀರಶೈವ ಧರ್ಮಾಚರಣೆ, ತತ್ತ್ವಜ್ಞಾನಗಳನ್ನು ಪ್ರಸಾರಗೊಳಿಸುವ ದೃಷ್ಟಿಯಿಂದ 'ಶಿವಾನುಭವ' ಪತ್ರಿಕೆಯನ್ನು ಡಾ. ಫ.ಗು. ಹಳಕಟ್ಟಿಯವರು ೧೯೨೬ ರಲ್ಲಿ ಪ್ರಾರಂಭಿಸಿದರು.

'ಶಿವಾನುಭವ' ಪತ್ರಿಕೆಯ ೩೫ ವರ್ಷಗಳ ಒಟ್ಟು ೩೨೦ ಸಂಚಿಕೆಗಳಲ್ಲಿ ವೀರಶೈವ ಧರ್ಮ, ಸಾಹಿತ್ಯ, ಸಂಸ್ಕೃತಿ ಹಾಗೂ ಇತಿಹಾಸಗಳನ್ನು ಕುರಿತು ಸಾವಿರಾರು ಚಾರಿತ್ರಿಕ, ವಿಮರ್ಶಾತ್ಮಕ ಹಾಗೂ ಸಂಶೋಧನಾತ್ಮಕ ಮೌಲಿಕ ಲೇಖನಗಳು ಪ್ರಕಟಗೊಂಡಿವೆ. ಒಂದು ಕಾಲಘಟ್ಟದ ವೀರಶೈವ ಇತಿಹಾಸವನ್ನು ತಿಳಿಯಬಯಸುವ ಸಂಶೋಧಕರು ಶಿವಾನುಭವ ಪತ್ರಿಕೆಗಳನ್ನು ಓದದೇ ವಿಧಿಯಿಲ್ಲ. ಈ ಮಹತ್ವದ ಅಂಶವನ್ನು ಮನಗಂಡ ನಮ್ಮ ನಾಡಿನ ಹಿರಿಯ ಗ್ರಂಥಾಲಯ ವಿಜ್ಞಾನಿ ಡಾ. ಎಸ್.ಆರ್. ಗುಂಜಾಳ ಅವರು ಶಿವಾನುಭವ ಪತ್ರಿಕೆಯ ಎಲ್ಲ ೩೨೦ ಸಂಚಿಕೆಗಳನ್ನು ಸಂಗ್ರಹಿಸಿ ಅವುಗಳಲ್ಲಿರುವ ಲೇಖನಗಳ ಸೂಚಿಯನ್ನು ತಯಾರಿಸಿ ಮಹದುಪಕಾರ ಮಾಡಿದ್ದಾರೆ.

ಮೃದು–ಮಧುರ ಮಾತಿನ, ನಯವಿನಯ ಸಂಪನ್ನ ಡಾ. ಎಸ್.ಆರ್. ಗುಂಜಾಳ ಅವರದು ಕನ್ನಡ ಸಾಹಿತ್ಯ ಹಾಗೂ ಗ್ರಂಥಾಲಯ ವಿಜ್ಞಾನ ಕ್ಷೇತ್ರದಲ್ಲಿ ದೊಡ್ಡ ಹೆಸರು. ಪಾದರಸದಂತೆ ನಿರಂತರ ಚಟುವಟಿಕೆಯಲ್ಲಿರುವ ಅವರು ಪ್ರಾಮಾಣಿಕತೆ, ದಕ್ಷತೆ, ವಿದ್ವತ್ತು, ಪರಿಶ್ರಮ ಹಾಗೂ ಕರ್ತವ್ಯಪ್ರಜ್ಞೆಗಳಂಥ ಮೌಲ್ಯಗಳನ್ನು ತಮ್ಮ ನಡೆನುಡಿಗಳಲ್ಲಿ ಅಳವಡಿಸಿಕೊಂಡವರು.

ಡಾ. ಗುಂಜಾಳ ಗ್ರಂಥಾಲಯ ವಿಜ್ಞಾನ ಕ್ಷೇತ್ರದಲ್ಲಿ ಸುದೀರ್ಘ ಸೇವೆ ಸಲ್ಲಿಸಿದವರು. ಈ ಅನುಭವದ ಹಿನ್ನೆಲೆಯಲ್ಲಿ ಓದುಗರ ನಾಡಿಮಿಡಿತಗಳನ್ನು ಚೆನ್ನಾಗಿ ಬಲ್ಲರು. ಓದುಗರ ಅವಶ್ಯಕತೆಗಳನ್ನು ಪೂರೈಸುವ ಸತ್ಯಶುದ್ಧ ಕಾಯಕ ಅವರದು. ಬೆಳಗಾವಿಯ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದ ಪ್ರಾಣವಾಗಿರುವ ಅವರು ಸಂಶೋಧಕರಿಗೆ ಗ್ರಂಥಾಲಯವನ್ನು ತವರು ಮನೆಯಾಗಿಸಿದ್ದಾರೆ. ಒಬ್ಬ ಆದರ್ಶ ಗ್ರಂಥಪಾಲಕ ಹೇಗಿರಬೇಕು ಎಂಬುದಕ್ಕೆ ಡಾ. ಗುಂಜಾಳ ಅವರು ಅತ್ಯುತ್ತಮ ಉದಾಹರಣೆ.

''ಶಿವಾನುಭವ ಪತ್ರಿಕೆ ಲೇಖನ ಸೂಚಿ'' ವೀರಶೈವೇತಿಹಾಸವನ್ನು ಅರಿಯ ಬಯಸುವವರಿಗೆ ಕೈಗನ್ನಡಿಯಂತಿದೆ. ಶಾಸ್ತ್ರಬದ್ಧ ವಿಷಯವಾರು ವಿಂಗಡನೆಯಿಂದಾಗಿ ನಮಗೆ ಬೇಕಾದ ವಿಷಯಗಳ ಲೇಖನಗಳನ್ನು ಕ್ಷಣಾರ್ಧದಲ್ಲಿಯೇ ದೊರಕಿಸಿ ಕೊಳ್ಳಬಹುದಾಗಿದೆ. ಇಂಥ ಮಹತ್ವದ ಕೃತಿಯೊಂದನ್ನು ಓದುಗರ ಕೈಗಿತ್ತ ಡಾ. ಎಸ್. ಆರ್. ಗುಂಜಾಳ ಹಾಗೂ ಪ್ರಕಟಿಸಿದ ಬಿ.ಎಲ್.ಡಿ.ಇ. ಸಂಸ್ಥೆಯ ಪದಾಧಿಕಾರಿಗಳು ನಮ್ಮೆಲ್ಲರ ಅಭಿನಂದನೆಗೆ ಪಾತ್ರರಾಗಿದ್ದಾರೆ.

ಶ್ರೀ ಸಿದ್ಧರಾಮ ಸ್ವಾಮಿಗಳು
ರುದ್ರಾಕ್ಷಿಮಠ
ನಾಗನೂರು–ಬೆಳಗಾವಿ

## ಪ್ರಕಾಶಕರ ನುಡಿ

ವಚನ ಸಾಹಿತ್ಯವು ಕನ್ನಡ ಸಾಹಿತ್ಯದ ಕೇಂದ್ರ ಬಿಂದುವಾಗಿದೆ. ೧೨ನೇ ಶತಮಾನದಲ್ಲಿ ಬಸವಾದಿ ಪ್ರಮಥರು ರಚಿಸಿದ ಈ ಅನುಭಾವ ಸಾಹಿತ್ಯವು ವಿಶ್ವದ ಶ್ರೇಷ್ಠ ಸಾಹಿತ್ಯದೊಂದಿಗೆ ಸಮಸಮನಾಗಿ ನಿಲ್ಲುವ ಶಕ್ತಿ–ಸಾಮರ್ಥ್ಯಗಳನ್ನು ಹೊಂದಿದೆ. ಪ್ಲೇಟೋ, ಸಾಕ್ರೇಟಿಸ್, ಕನಫ್ಯೂಸಿಯಸ್, ಅರಿಸ್ಟಾಟಲ್, ಕಾಂಟ್ ಮುಂತಾದ ದಾರ್ಶನಿಕರ ತತ್ವ ವಿಚಾರಗಳು, ಕಾರ್ಲಮಾರ್ಕ್ಸ್, ಲೆನಿನ್ ಮುಂತಾದ ಸಾಮಾಜಿಕ ಹೋರಾಟಗಾರರ ಯೋಜನೆಗಳು, ಗಾಂಧೀಜಿ, ಜೆ.ಪಿ., ರಾಜಾರಾಮ ಮೋಹನರಾಯ, ಲೋಹಿಯಾರಂತಹ ಕ್ರಾಂತಿಕಾರಿಗಳ ವಿಚಾರ ಸರಣಿ–ಇವೆಲ್ಲವುಗಳನ್ನು ಒಳಗೊಂಡಿರುವ ಒಂದು ಅನುಪಮ, ಅಪೂರ್ವ ಸಾಹಿತ್ಯ ಈ ವಚನ ಸಾಹಿತ್ಯ.

ಕಾಲಗರ್ಭದಲ್ಲಿ ಅವಸಾನ ಹೊಂದುತ್ತ ಬಂದ ಈ ವಚನ ಸಾಹಿತ್ಯಕ್ಕೆ ಪುನರ್‌ಜನ್ಮ ಕೊಟ್ಟು, ಶರಣರ ವಚನಗಳನ್ನೆಲ್ಲ ಶ್ರಮವಹಿಸಿ, ಸಂಪಾದಿಸಿ, ಪರಿಷ್ಕರಿಸಿ ಪ್ರಕಟಿಸಿದ ಕೀರ್ತಿ ಡಾ. ಫ. ಗು. ಹಳಕಟ್ಟಿಯವರದು.

ವಚನ ಪಿತಾಮಹರೆಂದೇ ಖ್ಯಾತರಾದ ಡಾ. ಫ. ಗು. ಹಳಕಟ್ಟಿಯವರು ಆಧುನಿಕ ಅನುಭಾವಿ, ವಚನ ಗುಮ್ಮಟದ ಶರಣ ಎಂದು ಜನಮಾನಸದಲ್ಲಿ ಉಳಿದುಕೊಂಡವರು. ೨೦ನೇ ಶತಮಾನದ ಆದಿಭಾಗದಲ್ಲಿ ವೀರಶೈವರ ಸ್ಥಿತಿ ಚಿಂತಾಜನಕವಾಗಿತ್ತು, ಆಗ ಡಾ. ಫ. ಗು. ಹಳಕಟ್ಟಿಯವರು ವೀರಶೈವರಲ್ಲಿ ಸಾಹಿತ್ಯಿಕ, ಸಾಮಾಜಿಕ, ಶೈಕ್ಷಣಿಕ ಜಾಗೃತಿಯನ್ನುಂಟು ಮಾಡಿದರು.

ಡಾ. ಫ. ಗು. ಹಳಕಟ್ಟಿಯವರು ಹಲವು ಶಕ್ತಿಗಳ ಸಂಗಮ. ಒಂದು ವಿಶ್ವವಿದ್ಯಾಲಯ, ಒಂದು ಸರಕಾರಿ ಅಥವಾ ಸಹಕಾರಿ ಸಂಸ್ಥೆ ಮಾಡಬಹುದಾದ ಬೃಹತ್ ಕಾರ್ಯಗಳನ್ನು ಏಕಾಂಗವೀರರಾಗಿ ಸಾಧಿಸಿ ತೋರಿಸಿದ ಧೀರರವರು.

ವಕೀಲರಾಗಿ, ಸಾಹಿತ್ಯ ಸಂಪಾದನಕಾರರಾಗಿ, ಪತ್ರಿಕಾ ಸಂಪಾದಕರಾಗಿ, ಮುಂಬೈ ರಾಜ್ಯದ ವಿಧಾನ ಪರಿಷತ್ತಿನ ಸದಸ್ಯರಾಗಿ, ಸಂಘ–ಸಂಸ್ಥೆಗಳ ಸಂಸ್ಥಾಪಕರಾಗಿ, ಶ್ರೀ ಸಿದ್ಧೇಶ್ವರ ಬ್ಯಾಂಕಿನ ಸಂಸ್ಥಾಪಕ ಅಧ್ಯಕ್ಷರಾಗಿ, ಅಖಿಲ ಭಾರತ ವೀರಶೈವ ಮಹಾಸಭೆ, ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ, ನಾಡು–ನುಡಿಯ ಏಳ್ಗೆಗಾಗಿ ನಿರಂತರ ಹೋರಾಟ ಮಾಡುತ್ತ, ಒಂದಲ್ಲ–ಎರಡಲ್ಲ ನೂರಾರು ಕಾರ್ಯ ಯೋಜನೆಗಳ ಸಮರ್ಥ ನೇತೃತ್ವ ವಹಿಸಿ ಅಚ್ಚುಕಟ್ಟಾಗಿ ಕಾರ್ಯನಿರ್ವಹಿಸಿ ಸಾಧಿಸಿ ತೋರಿಸಿದ ಮಹಾನ್ ಸಿದ್ಧಿ ಪುರುಷರು. ತಾವು ನೋವನ್ನುಂಡು ಪರರಿಗೆ ಸಂತೋಷವನ್ನು ನೀಡಿದ ತ್ಯಾಗಮಯ ಜೀವಿ ಅವರು.

ಅವರು ಬಿಟ್ಟು ಹೋದ ಆದರ್ಶ ಇಂದು ಸಮಸ್ತ ಕನ್ನಡಿಗರ ಮುಂದೆ ಇದೆ. ಆ ಕಾರಣಕ್ಕಾಗಿ ಅವರು ರಚಿಸಿದ ಸಾಹಿತ್ಯ ಶಾಶ್ವತವಾಗಿ ಜನಮಾನಸದಲ್ಲಿ ಉಳಿಯಲಿ; ಅವರ ದಿವ್ಯಾದರ್ಶದ ಬೆಳಕು ಸಕಲ ಕನ್ನಡಿಗರಿಗೂ ತಲುಪಲಿ ಎಂದು ನಮ್ಮ ಸಂಸ್ಥೆಯು ''ಡಾ. ಫ. ಗು. ಹಳಕಟ್ಟಿ ಸಂಶೋಧನ ಕೇಂದ್ರ'' ಕಟ್ಟಡದ ಶಂಕು ಸ್ಥಾಪನೆ

ನೆರವೇರಿಸಿತು. ೨೦ ಲಕ್ಷ ರೂ. ವೆಚ್ಚದಲ್ಲಿ ಈಗ ಕೇಂದ್ರ ಕಟ್ಟಡ ಸಿದ್ಧವಾಗಿದೆ. ಅವರು ನಮ್ಮ ಬಿ.ಎಲ್.ಡಿ.ಇ. ಸಂಸ್ಥೆಯ ಸಂಸ್ಥಾಪಕರು. ಅದಕ್ಕಾಗಿ ಅವರ ಸ್ಮಾರಕ ಸಂಶೋಧನ ಕೇಂದ್ರ ಕಟ್ಟಡದ ಉದ್ಘಾಟನಾ ಸಮಾರಂಭವು 'ನ ಭೂತೋ ನ ಭವಿಷ್ಯತಿ' ಎಂಬಂತೆ ಜರುಗಲೆಂದು ನಮ್ಮ ಸಂಸ್ಥೆಯ ಆಡಳಿತ ಮಂಡಳಿ ನಿರ್ಧರಿಸಿತು. ಅದಕ್ಕಾಗಿ ನಾಡಿನ ಗಣ್ಯ ವ್ಯಕ್ತಿಗಳ ಮಾರ್ಗದರ್ಶನ ಪಡೆದುಕೊಳ್ಳಲಾಯಿತು.

ಈ ಸಂದರ್ಭದಲ್ಲಿ ಡಾ. ಎಸ್. ಆರ್. ಗುಂಜಾಳ ಅವರಲ್ಲಿಯೂ ನಾವು ಮಾರ್ಗದರ್ಶನ ಪಡೆಯಲು ಹೋದಾಗ, ಅವರು ತಮ್ಮ ಹೊಸ ವಿಚಾರಗಳನ್ನು ನಮಗೆ ತಿಳಿಸುತ್ತ ಪ್ರಸ್ತುತ ಗ್ರಂಥದ ಪ್ರಕಟಣೆಯ ಪ್ರಸ್ತಾಪವೆತ್ತಿದರು. ಈ ಗ್ರಂಥವನ್ನು ನೋಡಿದಾಗ ನಮಗೆ ಆಶ್ಚರ್ಯ ಮತ್ತು ಸಂತೋಷ ಏಕಕಾಲಕ್ಕೆ ಆದವು.

ಡಾ. ಫ. ಗು. ಹಳಕಟ್ಟಿಯವರು ಫೆಬ್ರುವರಿ ೧೯೨೭ ರಿಂದ ಫೆಬ್ರುವರಿ ೧೯೬೧ರ ವರೆಗೆ ೩೪ ವರ್ಷಗಳ ಕಾಲ ಶಿವಾನುಭವ ಪತ್ರಿಕೆಯನ್ನು ಪ್ರಕಟಿಸಿದರು. ಅದರ ೨೫ನೇ ವರ್ಷದ ವರದಿಯಲ್ಲಿ ಅವರೇ ಒಂದು ಕಡೆ ''ನಾನು ಶಿವಾನುಭವ ಲೇಖನಗಳ–ಲೇಖಕರ ಅನುಕ್ರಮಣಿಕೆಯನ್ನು ಸಿದ್ಧಪಡಿಸಿದ್ದು ಅದನ್ನು ಪ್ರಕಟಿಸಿದರೆ ಈಗ ಸಧ್ಯಕ್ಕೆ ಉಪಯೋಗವಾಗಲಿಕ್ಕಿಲ್ಲ. ಏಕೆಂದರೆ ಶಿವಾನುಭವ ಪತ್ರಿಕೆಯ ಹಳೆಯ ಸಂಚಿಕೆಗಳನ್ನು ಕಾಯ್ದಿಟ್ಟುಕೊಂಡವರು ಕೆಲವರು ಮಾತ್ರ. ಅದನ್ನು ಪ್ರಕಟಿಸುವ ಕಾಲ ಇನ್ನೂ ಸಮಾಜದಲ್ಲಿ ಬಂದಿಲ್ಲ'' ಎಂದು ವ್ಯಸನಪೂರ್ವಕವಾಗಿ ಹೇಳಿದ್ದಾರೆ. (೧೯೫೦)

ಅರ್ಧಶತಮಾನದ ಹಿಂದೆ ಡಾ. ಫ. ಗು. ಹಳಕಟ್ಟಿಯವರು ಕಂಡ ಈ ಕನಸನ್ನು ನನಸು ಮಾಡುವ ನಿಟ್ಟಿನಲ್ಲಿ ಡಾ. ಗುಂಜಾಳರು ಶಿವಾನುಭವ ಪತ್ರಿಕೆಯ ೩೪ ವರ್ಷಗಳ ಸಂಪುಟಗಳಲ್ಲಿ ಪ್ರಕಟವಾಗಿರುವ ಲೇಖನಗಳ ಮತ್ತು ಲೇಖಕರ ಅನುಕ್ರಮಣಿಕೆಯನ್ನು ಶಾಸ್ತ್ರೀಯ ದೃಷ್ಟಿಯಿಂದ ಸಿದ್ಧಪಡಿಸಿದ್ದು ಅತ್ಯಂತ ಸಮಯೋಚಿತವಾಗಿದೆ.

ಡಾ. ಗುಂಜಾಳವರು ನಮ್ಮ ನಾಡಿನ ಅಪರೂಪದ ಗ್ರಂಥಪಾಲರು, ಸೂಚಿ ಸಾಹಿತ್ಯದ ನಿರ್ಮಾತೃಗಳಾದ ಅವರು ಸಿದ್ಧಪಡಿಸಿದ ಪದಪ್ರಯೋಗ ಕೋಶಗಳು, ಶಬ್ದಕೋಶಗಳು, ಲೇಖನ ಹಾಗೂ ಗ್ರಂಥ ಸೂಚಿಗಳು ಸಮಸ್ತ ಕನ್ನಡಿಗರ ಆದರ ಮತ್ತು ಗೌರವಗಳಿಗೆ ಕಾರಣವಾಗಿವೆ.

ಅವರು ಬಹಳಷ್ಟು ಶ್ರಮವಹಿಸಿ, ಶ್ರದ್ಧಾಪೂರ್ವಕ ಈ ಕಾರ್ಯವನ್ನು ನೆರವೇರಿಸಿದ್ದಾರೆ. ಈ ಗ್ರಂಥವನ್ನು ನಮ್ಮ ಸಂಸ್ಥೆಯಿಂದ ಪ್ರಕಟಿಸಲು ಅನುಮತಿ ನೀಡಿದ ಡಾ. ಗುಂಜಾಳರಿಗೆ ಸಂಸ್ಥೆಯ ಆಡಳಿತ ಮಂಡಳಿಯ ಅನಂತ ಕೃತಜ್ಞತೆಗಳು.

ಪ್ರಸ್ತುತ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯುವದರೊಂದಿಗೆ ಡಾ. ಗುಂಜಾಳರಿಗೆ ಸ್ಫೂರ್ತಿ ಪ್ರೇರಣೆಯನ್ನಿತ್ತು ಸಹಾಯ ಮಾಡಿದ ನಾಗನೂರು ಶ್ರೀ ರುದ್ರಾಕ್ಷಿ ಮಠದ ಅಧಿಪತಿಗಳಾದ ಶ್ರೀ ಮ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳಿಗೂ ನಮ್ಮ ನಮನಗಳು.

ದಿನಾಂಕ : ೨೫–೦೯–೨೦೦೨
ವಿಜಾಪುರ

ಬಿ. ಎಸ್. ಪಾಟೀಲ (ಕುಮಠ)
ಅಧ್ಯಕ್ಷರು
ಬಿ. ಎಲ್. ಡಿ. ಇ. ಸಂಸ್ಥೆ

# ಪ್ರಸ್ತಾವನೆ

## ೧. ವಚನ-ಸ್ವರ ವಚನ ಸಾಹಿತ್ಯ

ಬಸವಾದಿ ಶರಣ–ಶರಣೆಯರಿಂದ ಬರೆಯಲ್ಪಟ್ಟ ವಚನ–ಸ್ವರವಚನ ಸಾಹಿತ್ಯವು ಹಲವಾರು ಕಾರಣಗಳಿಂದ ಜನಸಾಮಾನ್ಯರ ಗಮನಕ್ಕೆ ಬಾರದೆ, ಹತ್ತೊಂಬತ್ತನೆಯ ಶತಮಾನದ ಕೊನೆಯವರೆಗೆ ಗುಪ್ತವಾಗಿಯೇ ಉಳಿಯಿತು. ಈ ಸಾಹಿತ್ಯನಿಧಿಯನ್ನು ಲೋಕದ ಗಮನಕ್ಕೆ ತರುವ ಮಹತ್ಕಾರ್ಯವು ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಪ್ರಾರಂಭವಾಯಿತು. ಅನಂತರ ಡಾ. ಹಳಕಟ್ಟಿ ಫಕೀರಪ್ಪನವರ ಅವಿರತ ಪರಿಶ್ರಮದ ಫಲವಾಗಿ ವಚನಸಾಹಿತ್ಯವು ಬೃಹತ್ ಪ್ರಮಾಣದಲ್ಲಿ ಬೆಳಕು ಕಂಡಿತು. ಶರಣ ಸಾಹಿತ್ಯವನ್ನು ಕನ್ನಡಿಗರೆಲ್ಲರ ಗಮನಕ್ಕೆ ತರುವ ಘನೋದ್ದೇಶದಿಂದ ಅವರು 'ಶಿವಾನುಭವ'ವೆಂಬ ನಿಯತಕಾಲಿಕೆಯನ್ನು ಫೆಬ್ರುವರಿ ೧೯೨೭ ರಂದು ಪ್ರಾರಂಭಿಸಿದರು. ಈ ಪತ್ರಿಕೆಯು ಸತತವಾಗಿ ೩೪ ವರುಷಗಳ ಪರ್ಯಂತ ವೀರಶೈವ ವಾಙ್ಮಯ ಸೇವೆಯನ್ನು ಮುಂದುವರಿಸಿಕೊಂಡು ಬಂದಿತು. ಪತ್ರಿಕೆಯ ಮೊದಲ ಸಂಚಿಕೆಯ ಸಂಪಾದಕೀಯದಲ್ಲಿ ಡಾ. ಫ.ಗು. ಹಳಕಟ್ಟಿಯವರು ಅದರ ಧ್ಯೇಯೋದ್ದೇಶಗಳನ್ನು ಕುರಿತು ದೀರ್ಘವಾಗಿ ಬರೆದಿರುವರು. ಇಂದಿಗೆ ಸುಮಾರು ೭೫ ವರುಷಗಳ ಪೂರ್ವದಲ್ಲಿ ಬರೆಯಲ್ಪಟ್ಟ ಈ ಮಹತ್ವಪೂರ್ಣ ಸಂಪಾದಕೀಯದ ಹೆಚ್ಚಿನ ಭಾಗವನ್ನು ವಾಚಕರ ಗಮನಕ್ಕೆ ತರಬಯಸಿದ್ದೇವೆ :

''ಶಿವಾನುಭವ ಮಾಸಪತ್ರಿಕೆಯ ಉದ್ದೇಶವು ವೀರಶೈವ ಧರ್ಮದಲ್ಲಿಯ ಧರ್ಮಗ್ರಂಥಗಳನ್ನು ಪ್ರಸಿದ್ಧಪಡಿಸುವದೇ ಮುಖ್ಯವಾಗಿರುತ್ತದೆ. ಈ ಉದ್ದೇಶದಿಂದ ಹೊರಡಿಸಲ್ಪಟ್ಟ ಪತ್ರಿಕೆಗಳಾಗಲಿ, ಇಲ್ಲವೆ ಪುಸ್ತಕಮಾಲಿಕೆಗಳಾಗಲಿ, ಈಗ ಯಾವವೂ ಇರುವುದಿಲ್ಲ. ಕೈ.ವಾ.ರಾವಬಹಾದ್ದೂರ ಮಲ್ಲಪ್ಪಾ ವಾರದ ಇವರು ಬಹಳ ಹಣ ವ್ಯಯ ಮಾಡಿ, ಅನೇಕ ಧಾರ್ಮಿಕ ಗ್ರಂಥಗಳನ್ನು ಮೊದಲು ಹೊರಪಡಿಸಿದರು. ಅವರ ಪ್ರಯತ್ನಗಳಿಂದ ಅನೇಕ ಧಾರ್ಮಿಕ ಗ್ರಂಥಗಳು ಅದರಲ್ಲಿ ವಿಶೇಷವಾಗಿ, ಸಂಸ್ಕೃತ ಗ್ರಂಥಗಳು ಹೊರಬಿದ್ದವು. ಅವರು ಮಾಡಿದ ಕಾರ್ಯವು ಚಿರಸ್ಮರಣೀಯವಾಗಿದೆ. ತರುವಾಯ ಕೈ.ವಾ. ಎನ್.ಆರ್. ಕರಿಬಸವ ಶಾಸ್ತ್ರಿಗಳು ಈ ಮಹತ್ವದ ಕಾರ್ಯವನ್ನು ಕೈಕೊಂಡು ''ವೀರಶೈವ ಗ್ರಂಥಪ್ರಕಾಶಿಕಾ'' ಎಂಬ ಹೆಸರಿನಿಂದ ಒಂದು ಮಾಸಪತ್ರಿಕೆಯನ್ನು ಹೊರಡಿಸ ಹತ್ತಿದರು. ಇದರ ದ್ವಾರದಿಂದ ಅನೇಕ ಸಂಸ್ಕೃತ, ಮತ್ತು ಕನ್ನಡ ಉದ್ಗ್ರಂಥಗಳು ಪ್ರಕಾಶಿತವಾದವು. ಆದರೆ ಈತ್ತೀಚೆಗೆ ಇಂಥ ಗ್ರಂಥ ಪ್ರಕಾಶದ ಕಾರ್ಯಗಳು ನಿಂತು ಹೋಗಿವೆ. ನಿಜವಾಗಿ ವೀರಶೈವ ವಾಙ್ಮಯವು ಬಹು ದೊಡ್ಡದಿದೆ ಮತ್ತು ನಾನಾ ವಿಧವುಳ್ಳದ್ದು ಅದೆ. ಇದನ್ನು ಪ್ರಕಟಪಡಿಸುವ ಪ್ರಯತ್ನಗಳು

ವೀರಶೈವ ಸಮಾಜದಿಂದ ಎಡೆಬಿಡದೆ ನಡಿಯದೆ ಹೋದರೆ, ಅದರ ನಿಜವಾದ ಹೆಚ್ಚಳಕ್ಕೆ ಕುಂದಕ ಉಂಟಾಗದೆ ಇರಲಾರದು. ಇದನ್ನು ಕೆಲಮಟ್ಟಿಗಾದರು ದೂರ ಮಾಡುವ ಉದ್ದೇಶದಿಂದ ನಾನು ಈಗಿನ ಪತ್ರಿಕೆಯನ್ನು ಪ್ರಾರಂಭಿಸಿದ್ದೇನೆ.

''ಈ ಪತ್ರಿಕೆಯ ದ್ವಾರಾ ಗ್ರಂಥಪ್ರಕಾಶನದಕಾರ್ಯವನ್ನಷ್ಟೇ ಅಲ್ಲ, ವೀರಶೈವ ಸಮಾಜದ ಧಾರ್ಮಿಕ,ರಾಜಕೀಯ, ಸಾಮಾಜಿಕ ಇತಿಹಾಸವನ್ನೂ ಸಹ ಆದಷ್ಟು ಮಟ್ಟಿಗೆ ಶೋಧಿಸಿ, ಪ್ರಕಟ ಮಾಡುವ ಕಾರ್ಯವನ್ನೂ ಕೈಕೊಳ್ಳಬೇಕೆಂದು ನಮ್ಮ ಉದ್ದೇಶವಿರುತ್ತದೆ. ವೀರಶೈವ ಸಮಾಜದಲ್ಲಿ ಬಹು ಪುರಾತನ ಕಾಲದಿಂದಲೂ ಅನೇಕ ಸಾಧುಸತ್ಪುರುಷರೂ ಧರ್ಮಪ್ರವರ್ತಕರೂ,ಉದಿಸಿ ಅವರು ಕರ್ನಾಟಕದಲ್ಲಿ ಅತ್ಯುಜ್ವಲವಾದ ಧರ್ಮ ಪ್ರಭೆಯನ್ನು ಬೀರಿದ್ದಾರೆ. ಅವರ ಕೃತಿಗಳನ್ನು ಕರ್ನಾಟಕಸ್ಥರು ಅರಿಯುವದು ಅತ್ಯಂತಾವಶ್ಯಕವು. ಅದರಂತೆಯೇ ವೀರಶೈವರಲ್ಲಿ ಅನೇಕ ಶೂರ ರಾಜಮನೆತನದವರು ಉದ್ಭವಿಸಿ, ಹಿಂದುತ್ವದ ರಕ್ಷಣೆಯ ಹೊಡೆದಾಟದಲ್ಲಿ ಕರ್ನಾಟಕ ರಾಜ್ಯಗಳು ಯಾವ ಯಾವ ಮಹಾತ್ಕಾರ್ಯಗಳನ್ನು ಕೈಕೊಂಡವೋ ಅವುಗಳಲ್ಲಿ ಅವರು ಯಾವ ತರದ ಸಹಾಯವನ್ನು ಮಾಡಿದರು ಎಂಬುದನ್ನೂ ಸಹ ಶೋಧಿಸಿ ಪ್ರಕಟಿಸುವದು ಬಹಳ ಅವಶ್ಯವಾಗಿದೆ. ಹೀಗೆ ನಮ್ಮ ಸಮಾಜದಲ್ಲಿ ಶೋಧಪಡಿಸತಕ್ಕ ಸಂಗತಿಗಳು ಅನೇಕವಿವೆ. ಮತ್ತು ಅವುಗಳ ಸಾಧನಗಳಾದರೂ ಇನ್ನೂ ಬಹಳ ಮಟ್ಟಿಗೆ ಉಪಲಬ್ಧವಿವೆ. ಈ ತರದ ಶೋಧನೆಯ ಕಾರ್ಯದಲ್ಲಿ ಕರ್ನಾಟಕಸ್ಥರನ್ನು ಅದರಲ್ಲಿ ವಿಶೇಷವಾಗಿ, ವೀರಶೈವ ಸುಶಿಕ್ಷಿತರನ್ನು ತತ್ಪರಗೊಳಿಸಿ, ಅವರನ್ನು ಶೋಧನೆಯ ಕಾರ್ಯಗಳಿಗೆ ಪ್ರೋತ್ಸಾಹಿಸುವದಾದರೂ ಈ ಪತ್ರಿಕೆಯ ಎರಡನೇ ಮುಖ್ಯ ಉದ್ದೇಶವಿರುತ್ತದೆ.

''ಶ್ರೀ ಬಸವೇಶ್ವರನು ಹಿಂದುಸ್ಥಾನದಲ್ಲಿ ಈವರೆಗೆ ಆಗಿ ಹೋದ ಧರ್ಮ ಸುಧಾರಕರಲ್ಲಿ ಅಗ್ರಗಣ್ಯನಾಗಿರುತ್ತಾನೆ. ಯಾವ ಕಾಲಕ್ಕೆ ಕರ್ನಾಟಕದಲ್ಲಿ ಸಾಮಾಜಿಕ ಮತ್ತುಧಾರ್ಮಿಕ ಸ್ಥಿತಿಯು ಮಸುಳಿಸಿ ಹೋಗಿತ್ತೋ, ಆಗ ಆತನು ಉತ್ಪನ್ನನಾಗಿ ಅದರ ಪ್ರಭಾವವನ್ನು ಅಲ್ಲಿ ಸ್ಥಿರಗೊಳಿಸಿದನು. ಅವನು ಹರಡಿದ ವಿಚಾರಗಳು ಅಸ್ಪೃಶ್ಯ ವರ್ಣದವರಿಂದ ಹಿಡಿದು ಮೇಲಿನ ವರ್ಣದವರವರೆಗೂ ರೋಮ ರೋಮ ಗಳಲ್ಲಿಯೂ ಸಂಧಿಸಿ ಹೋದದ್ದರಿಂದ, ಅವರೆಲ್ಲರಲ್ಲಿ ಒಂದು ತರದ ರಾಷ್ಟ್ರೀಯ ಭಾವನೆಯು ತುಂಬಲಿಕ್ಕೆ ಕಾರಣವಾಯಿತು. ಇದರ ಪ್ರಭಾವದಿಂದ ಅಸಂಖ್ಯ ಗ್ರಂಥಕಾರರು ಉತ್ಪನ್ನರಾದರು. ಮತ್ತು ಅವರು ತಮ್ಮ ಉಜ್ವಲ ವಿಚಾರಗಳನ್ನು ನಾನಾ ಬಗೆಯ ವಚನಗಳಿಂದ ನುಡಿದು, ತೋರಿಸಿದರು. ಅವರು ರಚಿಸಿದ ಈ ವಚನಗಳ ಸಮುದಾಯವು ಅಪಾರವಾಗಿರುತ್ತದೆ. ಈ ವಚನಗಳು ಎಷ್ಟು ಪ್ರಾಸಾದಿಕವೂ ಉದಾತ್ತವಿಚಾರದವೂ ಇರುತ್ತವೆಂಬುದು ನಾನು ಗ್ರಂಥಿಸಿದ ''ವಚನ ಶಾಸ್ತ್ರಸಾರ'' ವೆಂಬ ಗ್ರಂಥದಿಂದ ಕೆಲಮಟ್ಟಿಗೆ ವಾಚಕರಿಗೆ ತಿಳಿದು ಬರುವಂತೆ ಇದೆ. ಇಂಥ ವಾಙ್ಮಯವು ಯಾವ ಭಾಷೆಯಲ್ಲಿದ್ದರೂ ಅದಕ್ಕೆ ಅದು ಗೌರವವನ್ನು ಕೊಡದೆ ಇರಲಾರದು. ಇಂಥ ಶ್ರೇಷ್ಠವಾದ ವಾಙ್ಮಯವನ್ನು ಅಚ್ಚುಗೊಳಿಸಿ ಪ್ರಸಿದ್ಧಿಸುವದು



ನಮ್ಮ ಕರ್ನಾಟಕಸ್ಥರ, ಅದರಲ್ಲಿ ವಿಶೇಷವಾಗಿ ಲಿಂಗಾಯತರ ಕರ್ತವ್ಯವಾಗಿದೆ. ಈ ಉದ್ದೇಶವನ್ನು ಮುಂದಿಟ್ಟುಕೊಂಡು, ಅನೇಕ ವಚನಗ್ರಂಥಗಳನ್ನು ಈ ಶಿವಾನುಭವ ದಲ್ಲಿ ಕ್ರಮೇಣ ಪ್ರಕಟಪಡಿಸುತ್ತ ಹೋಗುವೆವು. ಈ ತರದ ವಾಙ್ಮಯಕ್ಕೆ ಕಾರಣೀಭೂತನಾದ, ಶ್ರೀ ಬಸವೇಶ್ವರನ ವಚನಗಳನ್ನೇ ಮೊದಲು ಪ್ರಕಟಪಡಿಸು ವೆವು. ಮುಂದೆ ಕ್ರಮವಾಗಿ ಬೇರೆ ಮಹತ್ವದ ವಚನಗಳನ್ನು ಇದರಲ್ಲಿ ಕೊಡುತ್ತಾ ಹೋಗುವೆವು.

''ಲಿಂಗಾಯತ ಧರ್ಮವು ಬಹುಜನ ಸಮಾಜವನ್ನು ಉಚ್ಚ ನೀಚ ಭಾವವನ್ನು ಎಳ್ಳಷ್ಟಾದರೂ ಮನಸ್ಸಿನಲ್ಲಿ ತಾರದೆ ಮೇಲಕ್ಕೆಬ್ಬಿಸಲು ಮುಂದೊರೆದಿರುತ್ತದೆ. ಈ ಪ್ರಯತ್ನದಲ್ಲಿ ಅದು ಯಾವ ತರದ ಅಸಾಧು ಮಾರ್ಗವನ್ನು ಸ್ವೀಕರಿಸಲಿಲ್ಲ. ಜನರಲ್ಲಿ ಭಕ್ತಿ, ನೀತಿ, ತಿಳುವಳಿಕೆ ಇವುಗಳನ್ನು ಹಬ್ಬಿಸಲಿಕ್ಕೆ ಯತ್ನಿಸಿ ಈ ಮಾರ್ಗದಿಂದಲೇ ಸಮಾಜದಲ್ಲಿ ಅತ್ಯುಚ್ಚ ಭಾವವನ್ನು ನೆಲೆಗೊಳಿಸಿರುತ್ತದೆ. ಈ ಮಾರ್ಗವನ್ನು ಇದು ಕೈಕೊಂಡಿರುವ ಕಾರಣ ಅದರ ಪ್ರವರ್ತಕರು ಹಗುರು ಭಾಷೆಯಲ್ಲಿಯೇ ತಮ್ಮ ವಿಚಾರಗಳನ್ನು ಪ್ರಕಟಿಸಲು ತೊಡಗಿದರು. ಈ ಉದ್ದೇಶದಿಂದ ಅವರು ಮೊದಲಿನ ನಾನಾ ತರದ ವೃತ್ತಗಳು,ಕಂದ ಪದ್ಯಗಳು ಮೊದಲಾದ ಕ್ಲಿಷ್ಟ ಕವಿತಾ ಪದ್ಧತಿಗಳನ್ನು ಬಿಟ್ಟುಕೊಟ್ಟು, ಎಂಥ ಪಾಮರನಿಗಾದರೂ ಸುಲಭವಾಗಿ ತಿಳಿಯುವಂತೆ ನಾನಾ ಬಗೆಯ ಷಟ್ಪದಿಗಳನ್ನೂ, ತ್ರಿಪದಿಗಳನ್ನೂ ಸಾಂಗತ್ಯಗಳನ್ನೂ ರಗಳೆಗಳನ್ನೂ ರಚಿಸಿರುವರು. ಈ ರಚನೆಗಳಾದರೂ ಬಹು ಸುಂದರವಾಗಿಯೂ ಪ್ರತಿಭಾಮಯ ವಾಗಿಯೂ ಇವೆ. ಆದರೆ ಈ ವಾಙ್ಮಯವು ಇನ್ನೂ ಅಜ್ಞಾತಾವಸ್ಥೆಯಲ್ಲಿ ಇದೆ.

ಅದನ್ನು ಸಹ ಶೋಧಿಸಿ ಈ ಪತ್ರಿಕೆಯಲ್ಲಿ ಪ್ರಸಿದ್ಧಿಸುವ ಯತ್ನವು ಮಾಡಲ್ಪಡುವದು."[೧]

ಡಾ.ಹಳಕಟ್ಟಿಯವರು ತಮ್ಮ ಮೊದಲ ಸಂಪಾದಕೀಯದಲ್ಲಿ ಶ್ರುತಪಡಿಸಿದಂತೆ ಅದರಲ್ಲಿಯ ಎಲ್ಲ ಉದ್ದೇಶಗಳನ್ನು ಕಾರ್ಯಗತ ಮಾಡಿರುವರು.

## ೨. ಶಿವಾನುಭವ ಪತ್ರಿಕೆ

ಡಾ. ಫ. ಗು. ಹಳಕಟ್ಟಿಯವರು ತಮ್ಮ ಪತ್ರಿಕೆಗೆ 'ಶಿವಾನುಭವ' ಎಂಬ ವೈಶಿಷ್ಟ್ಯಪೂರ್ಣವಾದ ಹೆಸರನ್ನು ಇಟ್ಟಿರುವರು. 'ಶಿವಾನುಭವ' ಪದವು ಸಮಗ್ರ ವೀರಶೈವ ವಾಙ್ಮಯದ ರಸಘಟ್ಟಿಯಂತೆ ಇದೆ. ಈ ಪದವನ್ನು ಬಳಸುವದಕ್ಕೆ ಅವರೇ ತಮ್ಮ ಶಿವಾನುಭವ ಪತ್ರಿಕೆಯ ೨೫ ವರುಷಗಳ ವರದಿಯಲ್ಲಿ ವಿವರಿಸಿರುವರು :

''ಶಿವಶರಣರ ತತ್ವಗಳ ಉದ್ದೇಶವು ಶಿವನ ಅನುಭವ ಎಂದರೆ ಶಿವನನ್ನು ಕಾಣುವದು ಅಥವಾ ಅರಿಯುವದು. ಇದೇ ಮುಖ್ಯವಾಗಿದ್ದರಿಂದಲೂ ಬಸವಾದಿ

---

೧. ಹಳಕಟ್ಟಿ (ಫ.ಗು.) ಶಿವಾನುಭವ: ಸಂಪುಟ ೧, ಸಂಚಿಕೆ. ೧ ಫೆಬ್ರುವರಿ ೧೯೨೬. ಸಂಪಾದಕೀಯ ಪುಟ: ೧-೪.

ಪ್ರಮಥರು ಕಲ್ಯಾಣ ಪಟ್ಟಣದಲ್ಲಿದ್ದಾಗ ತಮ್ಮ ಶರಣರ ಕೂಟಕ್ಕೆ ''ಶಿವಾನುಭವ ಮಂಟಪ'' ಎಂಬ ಹೆಸರನ್ನು ಇಟ್ಟಿದ್ದರಿಂದಲೂ ನಾನು ಈ ಪತ್ರಿಕೆಗೆ 'ಶಿವಾನುಭವ' ಎಂಬ ಹೆಸರನ್ನಿಟ್ಟೆನು.''[೨]

೩. ಶಿವಾನುಭವ ಗ್ರಂಥಮಾಲೆ :

ಡಾ. ಹಳಕಟ್ಟಿಯವರು ಶಿವಾನುಭವ ಪತ್ರಿಕೆಯ ಮೂಲಕ ಶಿವಾನುಭವ ಗ್ರಂಥಮಾಲೆಯನ್ನು ಪ್ರಾರಂಭಿಸಿ ಸುಮಾರು ೭೮ ಗ್ರಂಥಗಳನ್ನು ತಮ್ಮ ಜೀವಾವಧಿಯಲ್ಲಿ ಪ್ರಕಟಿಸಿರುವದು ನಮ್ಮ ಗಮನಕ್ಕೆ ಬಂದಿದೆ. ಇವರಿಂದ ರಚಿತವಾದ, ಸಂಪಾದಿತವಾದ ಇನ್ನೂ ಸುಮಾರು ೫೫ ಗ್ರಂಥಗಳು ಹಸ್ತಪ್ರತಿಯ ಅವಸ್ಥೆಯಲ್ಲಿಯೇ ಕಣ್ಮರೆಯಾಗಿ ಹೋಗಿವೆಯೆಂಬುದನ್ನು ವಿಷಾದದಿಂದ ತಿಳಿಸಬೇಕಾಗುತ್ತದೆ.

೪. ಪತ್ರಿಕೆಯ ೩೫ ವರುಷಗಳು :

ಶಿವಾನುಭವ ಪತ್ರಿಕೆಯು ಫೆಬ್ರುವರಿ ೧೯೨೬ ರಲ್ಲಿ ಪ್ರಾರಂಭವಾದದ್ದು ೧೫–೩–೧೯೬೧ ರವರೆಗೆ ಜೀವ ಹಿಡಿದುಕೊಂಡು ಬಂದು ೩೫ನೆಯ ಸಂಪುಟದ ೧, ೨ ಸಂಯುಕ್ತಸಂಚಿಕೆ ಪ್ರಕಟಿಸುವದರೊಂದಿಗೆ ಅದರ ಪ್ರಾಣ ಪಕ್ಷಿಯು ಕಾಲಗರ್ಭದಲ್ಲಿ ಐಕ್ಯವಾಯಿತು. ಅದು ಈ ದೀರ್ಘಾವಧಿಯಲ್ಲಿ ತ್ರೈಮಾಸಿಕವಾಗಿ ೩ ವರುಷ: ದ್ವೈಮಾಸಿಕವಾಗಿ ೫ ವರುಷ: ಮಾಸಿಕವಾಗಿ ೨೬ ವರುಷ ಪ್ರಕಟವಾಗಿದೆ. ಕೊನೆಯ ಅಂದರೆ ೩೫ನೆಯ ವರುಷ ಕೇವಲ ೧ ಮತ್ತು ೨ ಸಂಚಿಕೆಗಳನ್ನು ಸಂಯುಕ್ತವಾಗಿ ಪ್ರಕಟಿಸಲಾಗಿದೆ. ಈ ಎಲ್ಲ ಸಂಪುಟ, ಸಂಚಿಕೆ, ವರುಷಗಳ ವಿವರಗಳನ್ನು ಕೆಳಗೆ ಕಾಣಿಸಿದ್ದೇವೆ :

| ಸಂಪುಟ | ಅವಧಿ | ಸಂಚಿಕೆಗಳು |
|---|---|---|
| | ತ್ರೈಮಾಸಿಕ | |
| ಸಂಪುಟ : ೧ | ಫೆಬ್ರುವರಿ ೧೯೨೬ರಿಂದ ಸಪ್ಟೆಂಬರ ೧೯೨೬ರ ವರೆಗೆ | ೪ (೧–೪) |
| ಸಂಪುಟ : ೨ | ಮಾರ್ಚ ೧೯೨೭ ರಿಂದ ಡಿಶೆಂಬರ ೧೯೨೭ರ ವರೆಗೆ | ೪ (೫–೮) |
| ಸಂಪುಟ : ೩ | ಮಾರ್ಚ ೧೯೨೮ ರಿಂದ ಡಿಶೆಂಬರ ೧೯೨೮ರ ವರೆಗೆ | ೪ (೯–೧೨) |
| | ಮಾಸಿಕ | |
| ಸಂಪುಟ : ೪ | ಎಪ್ರೀಲ ೧೯೨೯ರಿಂದ ಮಾರ್ಚ ೧೯೩೦ ರ ವರೆಗೆ | ೧೨ (೧–೧೨) |
| ಸಂಪುಟ : ೫ | ಎಪ್ರೀಲ ೧೯೩೦ ರಿಂದ ಮಾರ್ಚ ೧೯೩೧ ರ ವರೆಗೆ | ೧೦ (೯–೧೦ ಮತ್ತು ೧೧–೧೨ ಸಂಯುಕ್ತ ಸಂಚಿಕೆಗಳು.) |
| | ದ್ವೈಮಾಸಿಕ | |
| ಸಂಪುಟ : ೬ | ಎಪ್ರೀಲ ೧೯೩೧ ರಿಂದ ಫೆಬ್ರುವರಿ ೧೯೩೨ ರ ವರೆಗೆ | ೬ |
| ಸಂಪುಟ : ೭ | ಎಪ್ರೀಲ ೧೯೩೨ ರಿಂದ ಫೆಬ್ರುವರಿ ೧೯೩೩ ರ ವರೆಗೆ | ೬ |
| ಸಂಪುಟ : ೮ | ಎಪ್ರೀಲ ೧೯೩೩ ರಿಂದ ಮಾರ್ಚ ೧೯೩೪ ರ ವರೆಗೆ | ೬ |
| ಸಂಪುಟ : ೯ | ಮೇ ೧೯೩೪ ರಿಂದ ಮಾರ್ಚ ೧೯೩೫ ರ ವರೆಗೆ | ೬ |
| ಸಂಪುಟ : ೧೦ | ಜುಲೈ ೧೯೩೫ ರಿಂದ ಜೂನ ೧೯೩೬ ರ ವರೆಗೆ | ೬ |
| | ಮಾಸಿಕ | |
| ಸಂಪುಟ : ೧೧ | ಅಗಸ್ಟ, ಸಪ್ಟೆಂಬರ ೧೯೩೬ ರಿಂದ ಸಪ್ಟೆಂಬರ ೧೯೩೭ ರ ವರೆಗೆ | ೧೧ (೬–೭ ಸಂಯುಕ್ತ) |
| ಸಂಪುಟ : ೧೨ | ಅಕ್ಟೋಬರ ೧೯೩೭ ರಿಂದ ಸಪ್ಟೆಂಬರ ೧೯೩೮ ರ ವರೆಗೆ | ೧೨ |
| ಸಂಪುಟ : ೧೩ | ಅಕ್ಟೋಬರ ೧೯೩೮ ರಿಂದ ಸಪ್ಟೆಂಬರ ೧೯೩೯ ರ ವರೆಗೆ | ೧೧ (೮–೯ ಸಂಯುಕ್ತ) |
| ಸಂಪುಟ : ೧೪ | ಅಕ್ಟೋಬರ ೧೯೩೯ ರಿಂದ ಸಪ್ಟೆಂಬರ ೧೯೪೦ರ ವರೆಗೆ | ೧೧ (೭–೮ ಸಂಯುಕ್ತ) |
| ಸಂಪುಟ : ೧೫ | ಅಕ್ಟೋಬರ ೧೯೪೦ ರಿಂದ ಸಪ್ಟೆಂಬರ ೧೯೪೧ ರ ವರೆಗೆ | ೧೦ (೮–೯ ಮತ್ತು ೧೦–೧೧ ಸಂಯುಕ್ತ) |
| ಸಂಪುಟ : ೧೬ | ಅಕ್ಟೋಬರ ೧೯೪೧ ರಿಂದ ಸಪ್ಟೆಂಬರ ೧೯೪೨ ರ ವರೆಗೆ | ೧೨ |

೨. ಹಳಕಟ್ಟಿ (ಫ.ಗು.) ಶಿವಾನುಭವ: ಪತ್ರಿಕೆಯ ೨೫ ವರುಷಗಳ ವರದಿಯು. ಪುಟ : ೪೩೭.

| | | |
|---|---|---|
| ಸಂಪುಟ : ೧೭ | ಅಕ್ಟೋಬರ ೧೯೪೨ ರಿಂದ<br>ಸಪ್ಟೆಂಬರ ೧೯೪೩ ರ ವರೆಗೆ | ೧೨ |
| ಸಂಪುಟ : ೧೮ | ಅಕ್ಟೋಬರ ೧೯೪೩ ರಿಂದ<br>ಸಪ್ಟೆಂಬರ ೧೯೪೪ ರ ವರೆಗೆ | ೧೦<br>(೨–೩ ಮತ್ತು ೬–೭ ಸಂಯುಕ್ತ) |
| ಸಂಪುಟ : ೧೯ | ಅಕ್ಟೋಬರ ೧೯೪೪ ರಿಂದ<br>ಸಪ್ಟೆಂಬರ ೧೯೪೫ ರ ವರೆಗೆ | ೧೧ |
| ಸಂಪುಟ : ೨೦ | ಅಕ್ಟೋಬರ ೧೯೪೫ ರಿಂದ<br>ಸಪ್ಟೆಂಬರ ೧೯೪೬ ರ ವರೆಗೆ | ೧೧<br>(೬–೭ ಸಂಯುಕ್ತ) |
| ಸಂಪುಟ : ೨೧ | ಅಕ್ಟೋಬರ ೧೯೪೬ ರಿಂದ<br>ಸಪ್ಟೆಂಬರ ೧೯೪೭ ರ ವರೆಗೆ | ೧೧<br>(೮–೯ ಸಂಯುಕ್ತ) |
| ಸಂಪುಟ : ೨೨ | ಅಕ್ಟೋಬರ ೧೯೪೭ ರಿಂದ<br>ಸಪ್ಟೆಂಬರ ೧೯೪೮ ರ ವರೆಗೆ | ೧೧ |
| ಸಂಪುಟ : ೨೩ | ಅಕ್ಟೋಬರ ೧೯೪೮ ರಿಂದ<br>ಸಪ್ಟೆಂಬರ ೧೯೪೯ ರ ವರೆಗೆ | ೧೧<br>(೫–೬ ಸಂಯುಕ್ತ) |
| ಸಂಪುಟ : ೨೪ | ಅಕ್ಟೋಬರ ೧೯೪೯ ರಿಂದ<br>ಡಿಸೆಂಬರ ೧೯೫೦ರ ವರೆಗೆ | ೧೦<br>(೬–೭ ಸಂಯುಕ್ತ<br>೮–೯ ಸಂಯುಕ್ತ) |
| ಸಂಪುಟ : ೨೫ | ಜನೇವರಿ ೧೯೫೧ ರಿಂದ<br>ಡಿಸೆಂಬರ ೧೯೫೧ ರ ವರೆಗೆ | ೧೨ |
| ಸಂಪುಟ : ೨೬ | ಜನೇವರಿ ೧೯೫೨ ರಿಂದ<br>ಡಿಸೆಂಬರ ೧೯೫೨ ರ ವರೆಗೆ | ೧೧<br>(೫–೬ ಸಂಯುಕ್ತ) |
| ಸಂಪುಟ : ೨೭ | ಜನೇವರಿ ೧೯೫೩ ರಿಂದ<br>ಡಿಸೆಂಬರ ೧೯೫೩ ರ ವರೆಗೆ | ೧೨ |
| ಸಂಪುಟ : ೨೮ | ಜನೇವರಿ ೧೯೫೪ ರಿಂದ<br>ಡಿಸೆಂಬರ ೧೯೫೪ | ೧೦<br>(೩–೪ ಮತ್ತು ೬–೭ ಸಂಯುಕ್ತ) |
| ಸಂಪುಟ : ೨೯ | ಜನೇವರಿ ೧೯೫೫ ರಿಂದ<br>ಡಿಸೆಂಬರ ೧೯೫೫ ರ ವರೆಗೆ | ೯ |
| ಸಂಪುಟ : ೩೦ | ಜನೇವರಿ ೧೯೫೬ ರಿಂದ<br>ಡಿಸೆಂಬರ ೧೯೫೬ ರ ವರೆಗೆ | ೯<br>(೨–೩, ೬–೭, ೧೦–೧೧ ಸಂಯುಕ್ತ) |



| | | |
|---|---|---|
| ಸಂಪುಟ : ೩೧ | ಜನೇವರಿ ೧೯೫೭ ರಿಂದ<br>ಡಿಸೆಂಬರ ೧೯೫೭ ರ ವರೆಗೆ | ೧೧<br>(೪–೫ ಸಂಯುಕ್ತ) |
| ಸಂಪುಟ : ೩೨ | ಜನೇವರಿ ೧೯೫೮ ರಿಂದ<br>ಡಿಸೆಂಬರ ೧೯೫೮ ರ ವರೆಗೆ | ೯<br>(೧–೨ ಮತ್ತು ೬–೭–೮ ಸಂಯುಕ್ತ) |
| ಸಂಪುಟ : ೩೩ | ಜನೇವರಿ ೧೯೫೯ ರಿಂದ<br>ಡಿಸೆಂಬರ ೧೯೫೯ | ೯<br>(೫–೬, ೭–೮ ಮತ್ತು ೧೧–೧೨ ಸಂಯುಕ್ತ) |
| ಸಂಪುಟ : ೩೪ | ಜನೇವರಿ ೧೯೬೦ ರಿಂದ<br>ಡಿಸೆಂಬರ ೧೯೬೦ | ೧೦<br>(೫–೬, ೮–೯–೧೦ ಸಂಯುಕ್ತ) |
| ಸಂಪುಟ : ೩೫ | ಜನೇವರಿ ೧೯೬೧ ರಿಂದ<br>ಫೆಬ್ರುವರಿ ೧೯೬೧ ರ ವರೆಗೆ | ೯<br>(೧–೨ ಸಂಯುಕ್ತ) |

ಮೇಲಿನ ಪಟ್ಟಿಯನ್ನು ಗಮನಿಸಿದರೆ ಕೆಳಗಿನ ಕೆಲವು ಅಂಶಗಳು ಗೊತ್ತಾಗುತ್ತವೆ:

ಅ) ಶಿವಾನುಭವ ಪತ್ರಿಕೆಯು ಪ್ರಾರಂಭದ ಮೂರು ವರುಷಗಳವರೆಗೆ (ಫೆಬ್ರುವರಿ ೧೯೨೬ ರಿಂದ ಡಿಸೆಂಬರ ೧೯೨೮ ರ ವರೆಗೆ) ತ್ರೈಮಾಸಿಕ ಪತ್ರಿಕೆಯಾಗಿ ಪ್ರಕಟವಾಗಿದೆ. ಈ ಅವಧಿಯಲ್ಲಿ ಪತ್ರಿಕೆಯು ನಿಯಮಿತವಾಗಿ ಪ್ರಕಟವಾಗಿದ್ದು ಒಟ್ಟು ೧೨ ಸಂಚಿಕೆಗಳನ್ನು ಪ್ರಕಟಿಸಿತು.

ಡಾ. ಹಳಕಟ್ಟಿಯವರು ಶಿವಾನುಭವವನ್ನು ತ್ರೈಮಾಸಿಕವನ್ನಾಗಿ ಪ್ರಕಟಿಸ ಬೇಕಾಗಿ ಬಂದ ಮುಖ್ಯ ಕಾರಣವನ್ನು ಹೇಳಿದ್ದಾರೆ. ಅಂದಿನ ಕಾಲದಲ್ಲಿ ವೀರಶೈವರಲ್ಲಿ ಬರಹಗಾರರು ಬೆರಳೆಣಿಸುವಷ್ಟು ಇದ್ದರು. ಅಂಥವರು ಲೇಖನಗಳನ್ನು ನಿಯಮಿತ ವಾಗಿ ಕಳಿಸುತ್ತಾರೆಂಬ ಭರವಸೆ ಇರಲಿಲ್ಲ. ಆದರೆ ಅನಂತರದಲ್ಲಿ ಆ ಸಮಸ್ಯೆ ಪರಿಹಾರ ವಾದಂತೆ ತೋರುತ್ತದೆ.

ಬ) ಆಗ ಅವರು ಶಿವಾನುಭವವನ್ನು ನಾಲ್ಕನೆಯ ಸಂಪುಟದಿಂದ ಮಾಸಿಕ ವನ್ನಾಗಿ ಪರಿವರ್ತಿಸಿದ್ದಾರೆ. ಅದು ಎಪ್ರೀಲ್ ೧೯೨೯ ರಿಂದ ಮಾರ್ಚ ೧೯೩೧ ರ ವರೆಗೆ ಅಂದರೆ ೨ ವರುಷ ಪ್ರಕಟವಾಗಿದೆ. ಆದರೆ ೪ನೆಯ ಸಂಪುಟವು ೧೨ ತಿಂಗಳ ವರೆಗೂ ನಿಯಮಿತವಾಗಿ ಪ್ರಕಟವಾಗಿದೆ. ೫ನೆಯ ಸಂಪುಟವು (ಎಪ್ರೀಲ್ ೧೯೩೦–ಮಾರ್ಚ್ ೧೯೩೧) ಲೇಖನಗಳಿಲ್ಲದೆ ಪ್ರಕಟವಾಗುವದು ದುಸ್ತರವಾದಂತೆ ತೋರು ತ್ತದೆ. ಹೀಗಾಗಿ ಇದರ ೯, ೧೦, ೧೧ ಮತ್ತು ೧೨ ತಿಂಗಳುಗಳ ಅವಧಿಗೆ ಶಿವಾನುಭವವನ್ನು ಸಂಯುಕ್ತ ಸಂಚಿಕೆಯನ್ನಾಗಿ ಪ್ರಕಟಿಸಿದ್ದಾರೆ. ಹೀಗಾಗಿ ೫ನೆಯ ಸಂಪುಟದಲ್ಲಿ ೧೦ ಸಂಚಿಕೆಗಳು ಮಾತ್ರ ಪ್ರಕಟವಾದಂತಾಗುತ್ತದೆ.

ಕ) ಮಾಸಿಕವಾಗಿದ್ದ ಶಿವಾನುಭವವನ್ನು ೬ನೇ ಸಂಪುಟದಿಂದ ಪುನಃ ದ್ವೈಮಾಸಿಕವನ್ನಾಗಿ ಪ್ರಕಟಿಸಲು ಪ್ರಾರಂಭಿಸಿದರು. ಈ ಕಾರ್ಯವು ೧೦ನೆಯ ಸಂಪುಟದ ಕೊನೆಯವರೆಗೆ (ಎಪ್ರೀಲ್ ೧೯೩೧ ರಿಂದ–ಜೂನ ೧೯೩೬ ರ ವರೆಗೆ) ೫

ವರುಷ ಯಾವುದೇ ಅಡೆತಡೆಯಿಲ್ಲದೆ ಪ್ರಕಟವಾಗಿದೆ. ಈ ಅವಧಿಯಲ್ಲಿ ೩೦ ಸಂಚಿಕೆಗಳು ಬೆಳಕು ಕಂಡಿವೆ.

ಡ) ಹಿಂದಿನ ಈ ಹತ್ತು ವರುಷಗಳ ತಮ್ಮ ಅನುಭವದಿಂದಲೂ, ಪತ್ರಿಕೆಯ ಪ್ರಚಾರ ಕಾರ್ಯದಿಂದ ವೀರಶೈವ ಮತ್ತು ವೀರಶೈವೇತರ ವಿದ್ವಾಂಸರ ಮನಸ್ಸಿನ ಮೇಲಾದ ಸತ್ ಪರಿಣಾಮದಿಂದಲೂ ಉತ್ತೇಜನಗೊಂಡ ಹಳಕಟ್ಟಿಯವರು ಶಿವಾನುಭವವನ್ನು ಮತ್ತೆ ಮಾಸಿಕವನ್ನಾಗಿ ಪ್ರಕಟಿಸಹತ್ತಿದರು. ಅದು ೧೧ನೆಯ ಸಂಪುಟದಿಂದ ೩೫ನೆಯ ಸಂಪುಟದವರೆಗೆ (ಅಗಸ್ಟ-ಸಪ್ಟೆಂಬರ ೧೯೩೬ ರಿಂದ ಜನೇವರಿ-ಫೆಬ್ರುವರಿ ೧೯೬೧) ಸುಮಾರು ೨೫ ವರುಷಗಳ ಕಾಲ ಮಾಸಿಕವಾಗಿಯೇ ಮುಂದುವರೆದು ಕೊನೆಗೆ ನಿಂತು ಹೋಯಿತು. ಈ ೨೫ ವರುಷಗಳ ಅವಧಿಯಲ್ಲಿ ೨೭ ಸಲ ಸಂಯುಕ್ತ ಸಂಚಿಕೆಗಳು ಪ್ರಕಟವಾಗಿವೆ. ಇವುಗಳಲ್ಲಿ ೨೫ ಸಂಚಿಕೆಗಳು ಎರಡೆರಡು ತಿಂಗಳಿಗೊಂದರಂತೆ ಪ್ರಕಟವಾಗಿದ್ದರೆ, ಮೂರು ಮೂರು ತಿಂಗಳಿಗೊಂದರಂತೆ ಎರಡು ಸಲ ಪ್ರಕಟ ವಾಗಿವೆ. ೨೪ನೆಯ ಸಂಪುಟದಲ್ಲಿ ಒಟ್ಟು ೧೦ ಸಂಚಿಕೆಗಳು ಮಾತ್ರ ಪ್ರಕಟವಾಗಿವೆ. ಈ ಅವಧಿಯಲ್ಲಿ ಒಟ್ಟಾರೆ ೩೨೦ ಸಂಚಿಕೆಗಳು ಪ್ರಕಟವಾಗಿವೆ. ತ್ರೈಮಾಸಿಕ, ದ್ವೈಮಾಸಿಕ, ಮಾಸಿಕ ಇವೆಲ್ಲವುಗಳ ಒಟ್ಟು ಸಂಖ್ಯೆ ಕೆಳಗಿನಂತಿದೆ :

| ಸಂಪುಟ | ಸಂಚಿಕೆ | | ತಿಂಗಳು-ವರುಷ |
|---|---|---|---|
| ೧-೩ | ೧೨ | ತ್ರೈಮಾಸಿಕ | ಫೆಬ್ರುವರಿ ೧೯೨೬ ಡಿಸೆಂಬರ ೧೯೨೮ |
| ೪-೫ | ೨೨ | ಮಾಸಿಕ | ಎಪ್ರೀಲ್ ೧೯೨೯ ಮಾರ್ಚ ೧೯೩೧ |
| ೬-೧೦ | ೩೦ | ದ್ವೈಮಾಸಿಕ | ಎಪ್ರೀಲ್ ೧೯೩೧ ಜೂನ ೧೯೩೬ |
| ೧೧-೩೫ **೪ | ೨೫೬ | ಮಾಸಿಕ | ಆಗಸ್ಟ ೧೯೩೬ ಫೆಬ್ರುವರಿ ೧೯೬೧ |
| ಒಟ್ಟು ೩೫ | ೩೨೦ | | |

ಡಾ. ಹಳಕಟ್ಟಿಯವರು ಶಿವಾನುಭವ ಪತ್ರಿಕೆಯನ್ನು ಪ್ರಾರಂಭಿಸುವದಕ್ಕೆ ಮುಂಚಿತವಾಗಿ ಅದಕ್ಕೆ ಬೇಕಾಗುವ ಲೇಖನ ಸಾಮಗ್ರಿಗಳನ್ನು ಸಂಗ್ರಹ ಮಾಡುತ್ತ ಬಂದಿರುವರು. ಏಕೆಂದರೆ ಅಂದಿನ ಕಾಲದಲ್ಲಿ ಕೇವಲ ಧಾರ್ಮಿಕ ವಿಷಯವನ್ನು ಕುರಿತು ಪ್ರಬುದ್ಧ ಪತ್ರಿಕೆಯೊಂದನ್ನು ನಡೆಸಿಕೊಂಡು ಹೋಗಬೇಕಾದರೆ, ಅವರು ಅದಕ್ಕೆ ಹಿನ್ನೆಲೆಯಾಗಿ ವಿಪುಲ ಗ್ರಂಥರಾಶಿಯನ್ನು ಹಸ್ತಪ್ರತಿಗಳನ್ನು ಶೇಖರಿಸುವದು ಅವಶ್ಯವಾಗಿತ್ತು. ಗ್ರಂಥ ಸಂಗ್ರಹಾಲಯದ ಬಗ್ಗೆ ತಮ್ಮ ದುಗುಡವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ :

---

**೪. ಡಾ. ಎಂ.ಎಂ. ಕಲಬುರ್ಗಿ : ಶಿವಾನುಭವ ಪತ್ರಿಕೆ ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ ೧೯೯೬, ಪು : ೮೦ರಲ್ಲಿ ಶಿವಾನುಭವ ಪತ್ರಿಕೆಯು ೩೫ ವರುಷಗಳಲ್ಲಿ ೩೫ ಸಂಪುಟಗಳನ್ನು ಅಂದರೆ ೩೫೮ ಸಂಚಿಕೆಗಳನ್ನು ಹೊರ ತಂದಿತು ಎಂದಿದ್ದಾರೆ. ನಮ್ಮ ಲೇಖ್ಖದಂತೆ ಶಿವಾನುಭವ ಪತ್ರಿಕೆಯ (ಸಂಯುಕ್ತ ಸಂಚಿಕೆಗಳನ್ನೊಳಗೊಂಡು) ೩೨೦ ಸಂಚಿಕೆಗಳು ಪ್ರಕಟವಾಗಿವೆ.



"ವಾಙ್ಮಯ ಸಂಶೋಧನ ಕಾರ್ಯಗಳು ಪ್ರಕೃತ ಪರಿಸ್ಥಿತಿಯಲ್ಲಿ ಇತರ ಸಂಶೋಧನ ಕಾರ್ಯಗಳಂತೆ ಒಂದೇ ಸವನೆ ನಡೆಯುವದು ಕಠಿಣವೆಂದು ನನಗೆ ತೋರುತ್ತದೆ. ವೀರಶೈವ ಪುರಾತನ ವಾಙ್ಮಯವು ಅಪಾರವಾಗಿದ್ದರೂ ಅದರ ಗ್ರಂಥ ಸಂಗ್ರಹ ಕಾರ್ಯಗಳು ವ್ಯವಸ್ಥಿತವಾಗಿ ಎಲ್ಲಿಯೂ ನಡೆದಿರುವದಿಲ್ಲ. ಆದ್ದರಿಂದ ಈ ವಾಙ್ಮಯದಲ್ಲಿಯ ಸಾಕಷ್ಟು ಗ್ರಂಥಗಳು ನಮ್ಮ ಕೈಗೆ ಬಿದ್ದಿರುವದಿಲ್ಲಾದ್ದರಿಂದ ಗ್ರಂಥಗಳನ್ನು ಅವಲಂಬಿಸಿ ಮಾಡುವ ಇಂಥ ಕಾರ್ಯಗಳು ಒಂದೇ ಸವನೆ ನಡೆಯುವದು ಶಕ್ಯವಿಲ್ಲ. ಧಾರವಾಡ, ವಿಜಾಪುರ, ಬೆಳಗಾವ ಈ ಪಟ್ಟಣಗಳಲ್ಲಿ ಪುರಾತನ ಗ್ರಂಥಗಳುಳ್ಳ ಪುಸ್ತಕಾಲಯಗಳು ಇರದ್ದರಿಂದ ನಮ್ಮಲ್ಲಿಯ ಸಂಶೋಧನ ಕಾರ್ಯಗಳು ಕುಂಠಿತವಾಗುತ್ತವೆ. ಆದರೆ ನಾನು ೧೯೨೦ ರ ವರೆಗೆ ಗ್ರಂಥ ಸಂಗ್ರಹ ಕಾರ್ಯವನ್ನು ಯಾವಾಗಲೂ ಮಾಡುತ್ತ ಬಂದಿದ್ದರಿಂದ ಈ ವರುಷಗಳ ತರುವಾಯ ನಾನು ಪ್ರಾರಂಭ ಮಾಡಿದ ಶಿವಾನುಭವ ಪತ್ರಿಕೆಯ ಮೂಲಕ ನನ್ನ ಸಂಶೋಧನ ಕಾರ್ಯಗಳನ್ನು ಒಂದೇ ಸವನೆ ನಡಿಸಲಿಕ್ಕೆ ಸಾಧ್ಯವಾಗಿರುತ್ತದೆ. ಆದರೆ ಅದಕ್ಕೂ ಪೂರ್ವದಲ್ಲಿ ಈ ಕಾರ್ಯಗಳನ್ನು ನಾನು ಕೈಕೊಂಡು ನಡಿಸುವದು ಶಕ್ಯವಿರಲಿಲ್ಲ."[೫]

ಹೀಗೆ ಪೂರ್ಣ ತಯಾರಿಯೊಂದಿಗೆ ಅವರು ತಮ್ಮ ಶಿವಾನುಭವ ಪತ್ರಿಕೆಯನ್ನು ಪ್ರಾರಂಭ ಮಾಡಿದರು. ಅದು ಪ್ರಕಟವಾಗಿ ಪ್ರಚಾರವಾದಂತೆ ಅವರ ಅನುಭವವು ಹಿಗ್ಗುತ್ತ ಹೋಯಿತು. ಅವರು ಹಿಡಿದ ಕಾರ್ಯವನ್ನು ನಿರಂತರ ಮಾಡುವ ಜಿಗುಟು ವ್ಯಕ್ತಿಗಳಾಗಿದ್ದರಿಂದ ಅದನ್ನು ೩೫ ವರುಷಗಳವರೆಗೆ ಅನೇಕ ಅಡೆ-ತಡೆಗಳನ್ನು ಎದುರಿಸುತ್ತ ಸತತವಾಗಿ ನಡಿಸಿಕೊಂಡು ಬಂದರು. ಅವರು ತಿಳಿಸಿದಂತೆ, ವೀರಶೈವ ಧರ್ಮದ ಮೇಲಿನ ಗ್ರಂಥಗಳನ್ನೊಳಗೊಂಡ ಸುವ್ಯವಸ್ಥಿತವಾದ ಒಂದೂ ಗ್ರಂಥಾಲಯವು ಆಗ ಕರ್ನಾಟಕದಲ್ಲಿ ಇರಲಿಲ್ಲವೆಂದು ತಿಳಿದು ಬರುತ್ತದೆ. ಆದ್ದರಿಂದ ಹಳಕಟ್ಟಿಯವರು ತಮ್ಮ ಸ್ವಂತ ಗ್ರಂಥ ಸಂಗ್ರಹದೊಂದಿಗೆ ಶಿವಾನುಭವವನ್ನು ಮುಂದುವರೆಸಿಕೊಂಡು ಹೋಗುವ ಧೈರ್ಯ ಮಾಡಿದರು.

## ೫. ಶಿವಾನುಭವ ಲೇಖನ ಸೂಚಿ :

ಡಾ. ಹಳಕಟ್ಟಿಯವರು ೨೫ ವರುಷಗಳವರೆಗೆ ಶಿವಾನುಭವದಲ್ಲಿ ಪ್ರಕಟವಾದ ಲೇಖನಗಳನ್ನು ಒಂದು ತಾರ್ಕಿಕ ಹಿನ್ನೆಲೆಯ ಮೇಲೆ ವರ್ಗೀಕರಿಸಿ ಸೂಚಿಯನ್ನು ಸಿದ್ಧಪಡಿಸಿದರು. ಈ ಸೂಚಿಯ ಆಧಾರದ ಮೇಲೆ ೨೫ ವರುಷಗಳ ವರದಿಯನ್ನು ಬರೆಯಲು ಅವರಿಗೆ ಸಾಧ್ಯವಾಯಿತು. ಶಿವಾನುಭವದಲ್ಲಿ ಲೇಖನಗಳನ್ನು ಬರೆದ ಪ್ರಮುಖ ಲೇಖಕರ ಹೆಸರುಗಳನ್ನು, ಪುಸ್ತಕ ಮತ್ತು ಲೇಖನಗಳ ವಿಷಯಗಳನ್ನು ಸಂಕ್ಷೇಪವಾಗಿ ಕೊಡಲು ಶಕ್ಯವಾಯಿತು. ಕೆಳಗಿನ ಅವರ ಮಾತುಗಳು ಈ ವಿಚಾರಗಳನ್ನು ಇನ್ನೂ ಸ್ಪಷ್ಟವಾಗಿ ತಿಳಿಸುತ್ತವೆ :

---

೫. ಹಳಕಟ್ಟಿ (ಫ.ಗು.) : ಶಿವಾನುಭವ ಪತ್ರಿಕೆಯ ೨೫ ವರುಷಗಳ ವರದಿಯು, ೧೯೫೧. ಸಂ. ೨೫, ಸಂಚಿಕೆ ೧೨, ಪು. ೪೧೭.

"ಈ ಯಾವತ್ತು ಲೇಖಗಳ ಅನುಕ್ರಮಣಿಕೆಯನ್ನು ನಾನು ಸಿದ್ಧಮಾಡಿದ್ದು ಅದನ್ನು ಪ್ರಸಿದ್ಧಿಸಿದರೆ ಅದು ಒಂದು ದೊಡ್ಡ ಗ್ರಂಥವೇ ಆಗುವದು. ಅದರಲ್ಲಿ ಎಲ್ಲ ಲೇಖಕರ ಲೇಖಗಳೂ ಬರಹಗಾರರ ಹೆಸರುಗಳೂ ಇವೆ. ಆದ್ದರಿಂದ ಸಂಶೋಧಕರಿಗೆ ಬಹಳ ಸಹಾಯವಾಗಬಹುದಾಗಿದೆ. ಆದರೆ ಅಂಥ ಕಾಲವು ವೀರಶೈವ ಸಮಾಜದಲ್ಲಿ ಇನ್ನೂ ಪ್ರಾಪ್ತವಾಗಿಲ್ಲ. ಪತ್ರಿಕೆಯ ಹಳೇ ಸಂಪುಟಗಳನ್ನು ಕಾದಿಟ್ಟುಕೊಂಡವರು ಕೆಲವರು ಮಾತ್ರ ಇದ್ದಾರೆ. ಆದ್ದರಿಂದ ಇಂಥ ಗ್ರಂಥವನ್ನು ಪ್ರಸಿದ್ಧಿಸುವದರಿಂದ ಬಹಳ ಜನರಿಗೆ ಸಧ್ಯಕ್ಕೆ ಪ್ರಯೋಜನವಾಗಲಾರದೆಂದು ನಾನು ಭಾವಿಸಿದ್ದೇನೆ."[೬]

ದುರ್ದೈವದಿಂದ ಅವರು ಶ್ರಮವಹಿಸಿ ಸಿದ್ಧಪಡಿಸಿದ ಆ ಲೇಖನ ಸೂಚಿಯು ಇಂದು ನಮಗೆ ಲಭ್ಯವಾಗಿಲ್ಲ. ಡಾ. ಹಳಕಟ್ಟಿಯವರೇ ಹೇಳುವಂತೆ ಅಂದಿನ ಕಾಲದಲ್ಲಿ ಲೇಖನಸೂಚಿಗಳ ಮಹತ್ವವನ್ನು ಸಂಶೋಧಕರು ಸಹ ಅಷ್ಟಾಗಿ ಅರಿತಿರಲಿಲ್ಲ. ಅವರು ಈ ಮಾತನ್ನು ಹೇಳಿ ಇಂದಿಗೆ ಸುಮಾರು ೫೦ ವರುಷಗಳೇ ಗತಿಸಿವೆಯಾದರೂ ವೀರಶೈವವನ್ನು ಕುರಿತ ಗ್ರಂಥ ಹಾಗೂ ಲೇಖನಸೂಚಿಗಳನ್ನು ಸಿದ್ಧಪಡಿಸಿ ಸಂಶೋಧಕರ ಅವಲೋಕನ ಅಭ್ಯಾಸಗಳಿಗೆ ಲಭ್ಯ ಮಾಡಿಕೊಡುವ ಪರಿಸ್ಥಿತಿ ಇಂದಿಗೂ ಉಂಟಾಗಿಲ್ಲವೆಂದೇ ಹೇಳಬೇಕು. ಇಂದಿನ ಅನೇಕ ವೀರಶೈವ ಸಂಘ–ಸಂಸ್ಥೆಗಳು, ಮಠ–ಮಾನ್ಯಗಳು ಗ್ರಂಥಗಳನ್ನು ಅಧಿಕ ಸಂಖ್ಯೆಯಲ್ಲಿ ಪ್ರಕಟಿಸುತ್ತಿವೆ. ಆದರೆ ಅವೆಲ್ಲವುಗಳನ್ನು ಒಂದೆಡೆಗೆ ಸಂಗ್ರಹಿಸಿ ಅವಲೋಕಿಸುವದು ಅಸಾಧ್ಯದ ಮಾತಾಗಿದೆ. ಹೀಗಾಗಿ ಸಂಶೋಧಕರಿಗೆ ಒಂದಿಲ್ಲೊಂದು ಅಡೆತಡೆಯುಂಟಾಗಿ ಅವರು ಕೈಕೊಂಡ ಸಂಶೋಧನೆಗಳು ಅಪೂರ್ಣವಾಗುತ್ತವೆ, ಅಸ್ಪಷ್ಟವಾಗುತ್ತವೆ. ಈ ಕೊರತೆಯನ್ನು ನೀಗಿಸುವದಕ್ಕಾಗಿ ಬೆಳಗಾವಿಯ ನಾಗನೂರು ಶ್ರೀ ರುದ್ರಾಕ್ಷಿಮಠದ ಅಧಿಪತಿಗಳಾದ ಶ್ರೀ ಮ.ನಿ.ಪ್ರ. ಸಿದ್ಧರಾಮ ಮಹಾಸ್ವಾಮಿಗಳು ೧೯೭೫ರಲ್ಲಿ 'ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯ'ವನ್ನು ಸ್ಥಾಪಿಸಿದರು. ಇದರಲ್ಲಿ ಕಳೆದ ಏಳು ವರುಷಗಳಲ್ಲಿ ಸುಮಾರು ೯೦೦೦ ವೀರಶೈವ ಸಾಹಿತ್ಯದ ಮೇಲಿನ ಗ್ರಂಥಗಳನ್ನು ಸಂಗ್ರಹಿಸಲಾಗಿದೆ. ಇವುಗಳಲ್ಲಿ ಕನ್ನಡ, ತೆಲಗು, ಸಂಸ್ಕೃತ, ಮರಾಠಿ, ಹಿಂದಿ, ಇಂಗ್ಲೀಷ ಮುಂತಾದ ಭಾಷೆಗಳಲ್ಲಿ ಪ್ರಕಟವಾದ ಗ್ರಂಥಗಳಿವೆ. ಈ ಎಲ್ಲ ಗ್ರಂಥಗಳಿಗೆ ಗ್ರಂಥಸೂಚಿಯನ್ನು ಸಿದ್ಧಪಡಿಸಲಾಗಿದೆ. ನಮ್ಮ ಗ್ರಂಥಾಲಯದಲ್ಲಿದ್ದ ಯಾವುದೊಂದು ಗ್ರಂಥವನ್ನು ಅವಲೋಕಿಸಬೇಕೆಂಬ ಸಂಶೋಧಕನಿಗೆ ತಕ್ಷಣವೇ ತೆಗೆದುಕೊಡುವ ವ್ಯವಸ್ಥೆಯನ್ನು ಮಾಡಲಾಗಿದೆ.

೬. ಲೇಖನ ಸೂಚಿಯ ಮಹತ್ವ :

ಗ್ರಂಥಸೂಚಿಗಳು ಯಾವುದೊಂದು ಗ್ರಂಥಾಲಯದಲ್ಲಿದ್ದ ಗ್ರಂಥಗಳ ಸ್ಥಾನವನ್ನು ನಿರ್ದೇಶಿಸುವದರೊಂದಿಗೆ ಸಂಶೋಧಕರಿಗೆ ತಕ್ಷಣ ಸಿಗುವಂತೆ ಸಹಾಯ ಮಾಡುತ್ತವೆ. ಅದೇ ರೀತಿ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳಿಗೆ ಸಿದ್ಧಪಡಿಸಿದ

೬. ಹಳಕಟ್ಟಿ (ಫ.ಗು.) : ಶಿವಾನುಭವ ಪತ್ರಿಕೆಯ ೨೫ ವರುಷಗಳ ವರದಿಯು. ಪು : ೪೬೩.



ಲೇಖನಸೂಚಿಗಳೂ ಸಹ ಸಂಶೋಧಕರಿಗೆ ಬೇಕೆನಿಸಿದ ಲೇಖನವನ್ನು ಅಲ್ಪಾವಧಿಯಲ್ಲಿ ದೊರಕಿಸಿಕೊಳ್ಳುವದಕ್ಕೆ ಸಹಾಯ ಮಾಡುತ್ತವೆ. ಗ್ರಂಥಗಳು ಒಂದು ವಿಷಯವನ್ನು ಕುರಿತು ವಿಸ್ತಾರವಾದ ಮಾಹಿತಿಯನ್ನು ನೂರಾರು ಪುಟಗಳಲ್ಲಿ ಕೊಡುತ್ತವೆ. ಹೀಗೆ ಪ್ರಕಟವಾದ ಗ್ರಂಥದೊಳಗಣ ಸೂಕ್ಷ್ಮವಾದ ಉಪ ವಿಷಯವನ್ನು ಆಯ್ದುಕೊಂಡು ಸವಿಸ್ತಾರವಾಗಿ ಸಂಶೋಧನಾತ್ಮಕವಾಗಿ ಲೇಖನಗಳು ಬರೆಯಲ್ಪಡುತ್ತವೆ. ಗ್ರಂಥದಲ್ಲಿ ವಿಷಯದ ವ್ಯಾಪ್ತಿ ವಿಶಾಲವಾಗಿದ್ದರೆ ಲೇಖನದೊಳಗಿನ ವಿಷಯವು ಸೂಕ್ಷ್ಮವಾಗಿರುತ್ತದೆ. ಈ ಸೂಕ್ಷ್ಮವಾದ ವಿಷಯದ ಹಿಂದು–ಮುಂದುಗಳನ್ನು ಆಳ–ನೀಳಗಳನ್ನು ವಿವೇಚನೆ ಮಾಡಿ ಸ್ಪಷ್ಟವಾದ ಚಿತ್ರಣವನ್ನು ಲೇಖನ ತೋರಿಸಿ ಕೊಡುತ್ತದೆ. ಆದುದರಿಂದ ಗ್ರಂಥಗಳಿಗಿಂತಲೂ ಲೇಖನಗಳು ಸಂಶೋಧಕರಿಗೆ ಹೆಚ್ಚು ಪ್ರಯೋಜನ ಬೀಳುತ್ತವೆ. ಲೇಖನಗಳು ಒಂದೇ ಪುಟದಲ್ಲಿ ಬರೆದಿರಬಹುದು. ಆದರೆ ಅದರಲ್ಲಿ ಅಡಕವಾದ ವಿಷಯವು ಅತ್ಯಂತ ಮಹತ್ವದ್ದಾಗಿರುತ್ತದೆ.

ಒಮ್ಮೊಮ್ಮೆ ಒಂದು ಸೂಕ್ಷ್ಮ ವಿಷಯವನ್ನು ಕುರಿತಾದ ದೀರ್ಘ ಲೇಖನವನ್ನು ಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಪ್ರಕಟಿಸಲೂಬಹುದು. ಹೀಗೆ ಪ್ರಕಟವಾದ ಲೇಖನಗಳನ್ನು ಅವಲೋಕಿಸಿ ಅಭ್ಯಸಿಸಿ, ಸಂಶೋಧಕರು ತಮ್ಮ ಹೊಸ ವಿಚಾರಗಳನ್ನು ಮಂಡಿಸುತ್ತ ಹೋಗುತ್ತಾರೆ. ಆದುದರಿಂದ ಅವರಿಗೆ ಬೇಕೆನಿಸಿದ ಸೂಕ್ಷ್ಮ ವಿಷಯದ ಮೇಲಿನ ಅಂದಂದಿನವರೆಗೆ ಆ ಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳ ಸೂಚಿಯು ಅತ್ಯುಪಯುಕ್ತವಾಗುತ್ತದೆ. ಸೂಚಿಗಳು ಇಲ್ಲದೆ ಹೋದರೆ ಸಂಶೋಧಕನ ಅಮೂಲ್ಯ ವೇಳೆ, ಪರಿಶ್ರಮಗಳು ಬೇಕೆನಿಸಿದ ಲೇಖನ ಹುಡುಕುವದರಲ್ಲಿಯೇ ವ್ಯಯವಾಗುತ್ತದೆ. ಎಷ್ಟೋ ಸಲ ಹೀಗೆ ಹುಡುಕುವ ಮಾರ್ಗದಲ್ಲಿ ನಡೆದು ಬೇಸತ್ತು ಹಿಡಿದ ಸಂಶೋಧನ ಕಾರ್ಯವನ್ನು ನಿಲ್ಲಿಸಬೇಕಾಗುತ್ತದೆ. ಆದುದರಿಂದ ನಿರಂತರವಾಗಿ ಸಂಶೋಧನ ಪತ್ರಿಕೆಗಳ ಲೇಖನಸೂಚಿಗಳನ್ನು ಸಿದ್ಧಪಡಿಸುವದು ಅನಿವಾರ್ಯವೆನಿಸುತ್ತದೆ.

ಇಂದಿನ ಸಂಶೋಧನ ಗ್ರಂಥಾಲಯಗಳಲ್ಲಿ ಈ ಸೂಚೀಕರಣ ಕಾರ್ಯಕ್ಕೆ ವಿಶೇಷ ತರಬೇತಿ ಪಡೆದ ವ್ಯಕ್ತಿಗಳನ್ನು ಅಧಿಕ ಸಂಬಳವನ್ನು ಕೊಟ್ಟು ನೇಮಿಸಿಕೊಳ್ಳುವದು ರೂಢಿಯಲ್ಲಿ ಬಂದಿದೆ. ವಿಶ್ವವಿದ್ಯಾಲಯಗಳಲ್ಲಿ ಕೆಲಸ ಮಾಡುವ ಪ್ರಾಧ್ಯಾಪಕರಷ್ಟೇ ಸಂಬಳವನ್ನು ಅಲ್ಲಿಯ ಗ್ರಂಥಪಾಲಕರೂ ಪಡೆಯುತ್ತಾರೆ. ಬೋಧಕರ ಸ್ಥಾನ–ಮಾನಗಳಿಗೆ ಸರಿಸಮಾನವಾದ ಸ್ಥಾನಮಾನಗಳು ಗ್ರಂಥಪಾಲಕರಿಗೆ ಇಂದು ಸರಕಾರದಿಂದ ಲಭ್ಯವಾಗಿವೆ. ಕನ್ನಡದಲ್ಲಿ ಅನೇಕ ಪತ್ರಿಕೆಗಳಿಗೆ ಲೇಖನ ಸೂಚಿಗಳನ್ನು ಗ್ರಂಥಪಾಲರು ಮಾಡಿದ್ದಾರೆ.[೭]

ಖ್ಯಾತ ಸಾಹಿತಿಗಳು, ಸಂಶೋಧಕರು ಆದ ಪ್ರೊ. ಸ. ಸ. ಮಾಳವಾಡರು

೭. ಗ್ರಂಥಸೂಚಿಯ ಹೆಚ್ಚಿನ ವಿವರಣೆಗಾಗಿ ಡಾ. ಎಸ್. ಆರ್. ಗುಂಜಾಳ ಹಾಗೂ ಶ್ರೀ ವ್ಹಿ. ಡಿ. ರಾಚನಾಯ್ಕರ ಬರೆದ "ಸಂಶೋಧನ ಲೇಖನಸೂಚಿ"ಯ ಪ್ರಸ್ತಾವನೆ ನೋಡಿ.

ವೀರಶೈವ ನಿಯತಕಾಲಿಕೆಗಳಿಗೆ ಸೂಚಿಗಳನ್ನು ಸಿದ್ಧಪಡಿಸುವದು ಅತ್ಯವಶ್ಯವೆಂದು ಅಭಿಪ್ರಾಯಪಟ್ಟಿರುವರು :

''೧೯೨೬ ರಲ್ಲಿ ಆರಂಭವಾದ 'ಶಿವಾನುಭವ' ಪತ್ರಿಕೆಯು ಮೂವತ್ತು ವರುಷಗಳಿಗೆ ಮೇಲ್ಪಟ್ಟು ಸೇವೆ ಸಲ್ಲಿಸಿತು. ಅದರಲ್ಲಿ ಪ್ರಕಟವಾದ ಸಂಶೋಧನಾತ್ಮಕ ಲೇಖನಗಳು ವಚನಸಾಹಿತ್ಯ, ಹರಿಹರದೇವನ ರಗಳೆಗಳು ಸಂಶೋಧಕರಿಗೆ ವಿಪುಲವಾದ ಆಹಾರವನ್ನು ಒದಗಿಸಿವೆ. ಈ ಬಗೆಯ ಕಾರ್ಯಕ್ಕೆಂದು ೧೯೩೪ ರಲ್ಲಿ ಆರಂಭವಾದ ಪದ್ಮಶ್ರೀ ಶಿವಮೂರ್ತಿಶಾಸ್ತ್ರಿಗಳ 'ಶರಣ ಸಾಹಿತ್ಯ' ಪತ್ರಿಕೆಯು ಈಗಲೂ ಸೇವೆ ಸಲ್ಲಿಸುತ್ತಿರುವದು ಸಂತೋಷದ ಮಾತಾಗಿದೆ.[೮] ೧೯೪೧ ರಲ್ಲಿ ಪ್ರೊ. ಬಸವನಾಳರ ಸಂಪಾದಕತ್ವದಲ್ಲಿ ಆರಂಭವಾದ 'ಸಾಹಿತ್ಯ ಸಮಿತಿ' ಪತ್ರಿಕೆಯು ಆಂಗ್ಲ ಮತ್ತು ಕನ್ನಡ ಹೀಗೆ ಎರಡು ಭಾಷಗಳಲ್ಲಿ ವಿದ್ವತ್ತೆಗೆ ಪ್ರಚುರವಾದ ಲೇಖನಗಳನ್ನು ಒದಗಿಸಿದೆ. ೧೯೪೬ ರಲ್ಲಿ ಆರಂಭವಾದ ಚೆನ್ನಮಲ್ಲಪ್ಪ ಮಾಸ್ತರರ 'ಸದ್ಧರ್ಮ ದೀಪಿಕೆ' ಪತ್ರಿಕೆಯ ಸೇವೆ ಪ್ರಶಂಸನೀಯವಾಗಿದೆ. ವಚನ ಪಿತಾಮಹ ಹಳಕಟ್ಟಿಯವರಂತಹ ಒಂದೇ ಮನದ ನಿಷ್ಠೆಯ ಬಲವನ್ನು ಚೆನ್ನಮಲ್ಲಪ್ಪ ಮಾಸ್ತರರು ಆ ಪತ್ರಿಕೆಗೆ ಒದಗಿಸಿದರು. ೧೯೫೦ ರಲ್ಲಿ ಆರಂಭವಾದ ಶಿವಯೋಗಮಂದಿರದ 'ಸುಕುಮಾರ' ಪತ್ರಿಕೆಯನ್ನು ಇಲ್ಲಿ ಉಲ್ಲೇಖಿಸಬೇಕು. ೧೯೬೦ ರಲ್ಲಿ ಡಾ. ಪಾವಟೆ, ಡಾ. ನಂದೀಮಠರವರ ನೇತೃತ್ವದಲ್ಲಿ ಮಹಾಸಭೆಯ ಪರವಾಗಿ ಆರಂಭವಾದ 'ವೀರಶೈವ' ತ್ರೈಮಾಸಿಕದಲ್ಲಿ ವಿದ್ವಾಂಸರ ವಿವಿಧ ಲೇಖನಗಳು ಪ್ರಕಟವಾಗಿವೆ. ಈ ಎಲ್ಲ ಪತ್ರಿಕೆಗಳಲ್ಲಿಯ ಲೇಖನಗಳ ಸೂಚಿಯನ್ನು ಸಿದ್ಧಗೊಳಿಸುವ ಕಾರ್ಯವಿನ್ನೂ ನಡೆಯಬೇಕಾಗಿದೆ.''[೯]

ಲೇಖನಸೂಚಿಯ ಮಹತ್ವವನ್ನು ತಿಳಿಸುವ ಇಂಥದೆ ಅಭಿಪ್ರಾಯವನ್ನು ಡಾ. ಬಿ.ವಿ. ಮಲ್ಲಾಪುರ ಅವರು ಹೇಳಿರುವದನ್ನು ನಾವಿಲ್ಲಿ ನೆನೆಸಬಹುದು.

''ಶಿವಾನುಭವ ಪತ್ರಿಕೆಯ ವಿವಿಧ ಸಂಚಿಕೆಗಳಲ್ಲಿ ಬಂದಿರುವ ಹಲವಾರು ಮೌಲಿಕ ಲೇಖನಗಳನ್ನು ವಿಷಯಾನುಗುಣವಾಗಿ ಹೊಂದಿಸಿ ಪ್ರಕಟಿಸಿದರೆ ನಿಶ್ಚಯವಾಗಿಯೂ ಅದೊಂದು ಸಂದರ್ಭ ಗ್ರಂಥವಾಗುವುದರಲ್ಲಿ ಸಂದೇಹವಿಲ್ಲ. ಆಲೋಚಕರಿಗೆ, ಸಂಶೋಧಕರಿಗೆ ಅದರಿಂದ ದೊರೆಯುವ ನೆರವು ಅಪಾರವೆಂದು ನನ್ನ ಭಾವನೆ. ಹಳಕಟ್ಟಿಯವರಿಗೆ ಕೃತಜ್ಞತೆ ಸಲ್ಲಿಸಲು ಅದೊಂದು ಅರ್ಥಪೂರ್ಣ ಸೂಕ್ತಮಾರ್ಗ. ಈ ನಿಟ್ಟಿನಲ್ಲಿ ಸಂಘ ಸಂಸ್ಥೆಗಳು ಆಲೋಚಿಸಬೇಕು.''[೧೦]

ಡಾ. ಮಲ್ಲಾಪುರ ಹಾಗೂ ಸ.ಸ. ಮಾಳವಾಡರ ಹೇಳಿಕೆಯಂತೆ ಹಳಕಟ್ಟಿಯವರ ಶ್ರೀಮುಡಿಗೆ ಹೂವನ್ನು ತರುವ, ಆತ್ಮಕ್ಕೆ ಶಾಂತಿಯನ್ನೀಯುವ ಕಾರ್ಯವನ್ನು

೮. ಈಗ ಅದು ಪ್ರಕಟವಾಗುತ್ತಿಲ್ಲ, ೪ ದಶಕಗಳ ಹಿಂದೆ ಬರೆದ ಲೇಖನವಿದು.
೯. ಮಾಳವಾಡ (ಸ.ಸ.) : 'ವೀರಶೈವ ಪಥ' ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪು : ೧೦.
೧೦. ಮಲ್ಲಾಪೂರ (ಬಿ.ಬಿ.) : ಸುಧಾರ್ಣವ, ಭಾಗ : ೧ ಹಳಕಟ್ಟಿಯವರ ಶಿವಾನುಭವ ಪತ್ರಿಕೆ : ಒಂದು ಸಮೀಕ್ಷೆ : ಪು. ೫೬೩.



ನಾವು ಈ ಲೇಖನಸೂಚಿಯ ಮುಖಾಂತರ ಮಾಡಿದ್ದೇವೆ. ಆಲೋಚಕರಿಗೆ, ಸಂಶೋಧಕರಿಗೆ ನೆರವು ನೀಡುವ ದೃಷ್ಟಿಯಿಂದ ಶಿವಾನುಭವ ಪತ್ರಿಕೆಯ ೩೫ ಸಂಪುಟಗಳಲ್ಲಿ ಪ್ರಕಟ ವಾದ ಲೇಖನಗಳನ್ನು ವರ್ಗೀಕರಿಸಿ ಪ್ರಸ್ತುತ ಲೇಖನ ಸೂಚಿಯನ್ನು ಸಿದ್ಧಪಡಿಸಿದ್ದೇವೆ.

೭. ಸೂಚಿಯ ನೀಲನಕ್ಷೆ :

೧) ಲೇಖನಗಳು : ಶಿವಾನುಭವದಲ್ಲಿ ಪ್ರಕಟವಾದ ಸುಮಾರು ೧೭೪೩ ಲೇಖನಗಳನ್ನು ಈ ಸೂಚಿಯಲ್ಲಿ ಅಳವಡಿಸಿದ್ದೇವೆ. ಲೇಖನಗಳ ವಿಭಜನೆ ಮಾಡಲು ವಿನೂತನವಾದ, ತಾರ್ಕಿಕ ಹಿನ್ನೆಲೆಯುಳ್ಳ ಪ್ರತ್ಯೇಕವಾದ ಒಂದು ಸೂಚೀಕರಣ ಪದ್ಧತಿಯನ್ನೇ (Scheme of classification) ನಿರ್ಮಿಸಿಕೊಂಡಿದ್ದೇವೆ. ವಿಶ್ವವಿಖ್ಯಾತವಾದ ಮೆಲ್‌ವಿಲ್ ಡ್ಯೂಯಿ ವಿದ್ವಾಂಸರು ಕಂಡು ಹಿಡಿದ ದಶಮಾಂಶ ವರ್ಗೀಕರಣ ಪದ್ಧತಿಯ (Decimal Classification) ರೂಪರೇಷೆಯನ್ನು ಅನುಸರಿಸಿದ್ದೇವೆ. ಇದು ಜಗತ್ತಿನ ಲಕ್ಷಾಂತರ ಗ್ರಂಥಾಲಯಗಳಲ್ಲಿ ಉಪಯೋಗಿಸಲ್ಪಡುತ್ತಿರುವ ಹೆಗ್ಗಳಿಕೆಯ ಪದ್ಧತಿ. ಆದರೆ ದುರ್ದೈವದಿಂದ ಈ ಪದ್ಧತಿಯಲ್ಲಿ 'ವೀರಶೈವ' ಧರ್ಮಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಪ್ರತ್ಯೇಕ ವರ್ಗಾಂಕದ ಅಡಿಯಲ್ಲಿ ಸೇರಿಸಲು ಬರುವಂತಿಲ್ಲ. 'ಹಿಂದೂಧರ್ಮ' ಎಂಬ ವಿಷಯದ ಶಿರೋನಾಮದಡಿಯಲ್ಲಿ ಅನಿವಾರ್ಯವಾಗಿ ಸೇರಿಸಬೇಕಾಗುತ್ತದೆ. ಡ್ಯೂಯಿಯವರು 'ವೀರಶೈವ' ಅಥವಾ 'ಲಿಂಗಾಯತ' ಈ ಮಹತ್ವದ ಶಬ್ದಗಳನ್ನು ಎಲ್ಲಿಯೂ ತಮ್ಮ ಪದ್ಧತಿಯಲ್ಲಿ ಬಳಸಿಲ್ಲ. ಆದರೂ ಸಹ ಅದರ ವಿಶ್ವವಿಖ್ಯಾತಿಯ ಪ್ರಯೋಜನಕಾರಿ ಯೋಜನೆಯನ್ನು ಮನದಂದು ಅದರ ತತ್ವಗಳನ್ನು ನಾವು ಮೂಲವಾಗಿ ಬಳಸಿಕೊಂಡು ಅವುಗಳ ಆಧಾರದ ಮೇಲೆ ವೀರಶೈವದ ಸುಮಾರು ೩೦೦ ಸೂಕ್ಷ್ಮಾತೀಸೂಕ್ಷ್ಮ ವಿಷಯ ಶೀರ್ಷಿಕೆಗಳನ್ನು ಸುಲಭವಾಗಿ ವರ್ಗೀಕರಿಸಲು ಬರುವಂತೆ ವಿಸ್ತರಿಸಿಕೊಂಡಿದ್ದೇವೆ.

೨) ಲೇಖನ ವಿಷಯಗಳು : ಶಿವಾನುಭವ ಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳನ್ನು ನಾವು ಸಿದ್ಧಪಡಿಸಿದ ವರ್ಗೀಕರಣ ಪದ್ಧತಿಯಂತೆ ೧೨೩ ಶೀರ್ಷಿಕೆಗಳನ್ನು ಬಳಸಿಕೊಂಡು ವಿಭಜಿಸಿದ್ದೇವೆ.

ಎಲ್ಲ ಲೇಖನಗಳನ್ನು ಮೊದಲು ಕೆಳಗಿನಂತೆ ೧೦ ಪ್ರಮುಖ ವಿಷಯ ಶೀರ್ಷಿಕೆಗಳಡಿಯಲ್ಲಿ ವಿಭಜಿಸಿದ್ದೇವೆ.

| ವರ್ಗಾಂಕ | ಪ್ರಮುಖ ವಿಷಯ ಶೀರ್ಷಿಕೆಗಳು | |
|---|---|---|
| ೦೦೨ | ಸಂದರ್ಭ ಲೇಖನಗಳು | |
| ೧೦೦ | ತತ್ವಜ್ಞಾನ, ಸೈಕಾಲಜಿ ಲೇಖನಗಳು | |
| ೨೦೦ | ವೀರಶೈವ ಧರ್ಮ | ,, |
| ೩೦೦ | ಸಮಾಜ ವಿಜ್ಞಾನ | ,, |
| ೪೦೦ | ಭಾಷಾ ವಿಜ್ಞಾನ | ,, |

| | | |
|---|---|---|
| ೫೦೦ | ಸೃಷ್ಟಿ ವಿಜ್ಞಾನ | ಲೇಖನಗಳು |
| ೬೦೦ | ತಾಂತ್ರಿಕ ವಿಜ್ಞಾನ | ,, |
| ೭೦೦ | ಕಲೆ | ,, |
| ೮೦೦ | ಸಾಹಿತ್ಯ | ,, |
| ೯೦೦ | ಇತಿಹಾಸ | ,, |

ಅನಂತರ ಪ್ರತಿಯೊಂದು ಪ್ರಮುಖ ವಿಷಯ ವಿಭಾಗದಲ್ಲಿಯ ಲೇಖನಗಳನ್ನು ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನಾಗಿ ಪುನಃ ಪ್ರತ್ಯೇಕಿಸಿದ್ದೇವೆ. ಅವುಗಳ ವರ್ಗಾಂಕಗಳನ್ನು ಮತ್ತು ಪದಗಳನ್ನು ಪ್ರಸ್ತುತ ಲೇಖನಸೂಚಿಯಲ್ಲಿ ಮುಖ್ಯ ತಲೆಬರಹವನ್ನಾಗಿ ಕೊಟ್ಟಿದ್ದೇವೆ. ಅದರ ಕೆಳಗೆ ಆ ವಿಷಯಕ್ಕೆ ಸಂಬಂಧಿಸಿದ ಲೇಖಕರ ಹೆಸರಿನೊಂದಿಗೆ ಲೇಖನಗಳನ್ನು ವರ್ಣಾನುಕ್ರಮವಾಗಿ ಜೋಡಿಸಿದ್ದೇವೆ. ಅಂದರೆ ಈ ವಿಭಜನೆಯಲ್ಲಿ ವರ್ಗಾಂಕಗಳು ಮತ್ತು ವಿಷಯ ಸೂಚಿಸುವ ಪದಗಳು ಆಯಾ ಗುಂಪಿನ ಶಿರೋನಾಮಗಳಾಗಿ ಉಪಯೋಗಿಸಲ್ಪಟ್ಟಿವೆ. ಹೀಗೆ ಉಪಯೋಗಿಸಲ್ಪಟ್ಟ ವರ್ಗಾಂಕ ಮತ್ತು ವಿಷಯಗಳನ್ನು ಆಯಾ ವಿಷಯದಲ್ಲಿ ಬರುವ ಒಟ್ಟು ಲೇಖನಗಳನ್ನು ಪರಿವಿಡಿಯಲ್ಲಿ ಅವಲೋಕಿಸಿ ಅರಿತುಕೊಳ್ಳಬಹುದು.

ಓದುಗರ ತಿಳಿವಳಿಕೆಗಾಗಿ ಒಂದು ಉದಾಹರಣೆಯನ್ನು ಇಲ್ಲಿ ಕೊಟ್ಟಿದ್ದೇವೆ.

| ವರ್ಗಾಂಕ | | ಸೂಕ್ಷ್ಮ ವಿಷಯ ಶೀರ್ಷಿಕೆಗಳು |
|---|---|---|
| ೨೦೦ | : | ವೀರಶೈವ (ಲಿಂಗಾಯತ) ಧರ್ಮ |
| ೨೧೦ | : | ಅಷ್ಟಾವರಣಗಳು |
| ೨೨೦ | : | ಪಂಚಾಚಾರಗಳು |
| ೨೩೦ | : | ಷಟ್‌ಸ್ಥಲಗಳು |

ಮೇಲಿನ ೩ ಪ್ರಮುಖ ವಿಷಯಗಳಲ್ಲಿ ಅಷ್ಟಾವರಣಗಳನ್ನು ಕೆಳಗಿನಂತೆ ಪುನಃ ವಿಭಜಿಸಿದ್ದೇವೆ.

| ವರ್ಗಾಂಕ | ಸೂಕ್ಷ್ಮಾತಿಸೂಕ್ಷ್ಮ ವಿಷಯ ಶೀರ್ಷಿಕೆಗಳು | ಈ ಸೂಚಿಯ ಲೇಖನ ಕ್ರಮಾಂಕ | ಒಟ್ಟು ಲೇಖನಗಳು |
|---|---|---|---|
| ೨೧೦ | ಅಷ್ಟಾವರಣ (ಸಾಮಾನ್ಯ) | ೨೧೦–೨೨೫ | ೧೭ |
| ೨೧೧ | ಗುರು | ೨೨೬–೨೩೩ | ೮ |
| ೨೧೨ | ಲಿಂಗ | ೨೩೪–೩೦೧ | ೬೬ |
| ೨೧೩ | ಜಂಗಮ | ೩೦೨–೩೦೮ | ೭ |
| ೨೧೪ | ಪಾದೋದಕ | ೩೦೯–೩೧೮ | ೧೦ |
| ೨೧೫ | ಪ್ರಸಾದ | ೩೧೯–೩೨೨ | ೪ |
| ೨೧೬ | ವಿಭೂತಿ | ೩೨೩–೩೨೪ | ೨ |
| ೨೧೭ | ರುದ್ರಾಕ್ಷಿ | ೩೨೫ | ೧ |
| ೨೧೮ | ಮಂತ್ರ | ೩೨೬–೩೩೪ | ೯ |
| | | ಒಟ್ಟು ಲೇಖನ ಸಂಖ್ಯೆ | ೧೨೪ |



ಅಷ್ಟಾವರಣ ಕುರಿತ ಒಟ್ಟು ೧೨೪ ಲೇಖನಗಳು ಶಿವಾನುಭವದಲ್ಲಿ ಪ್ರಕಟವಾಗಿವೆ. ಅನುಕ್ರಮ ನಂಬರುಗಳನ್ನು ನೋಡಿ ಲೇಖನದ ಲೇಖಕ ಮತ್ತು ವಿಷಯವನ್ನು ಅರಿತುಕೊಳ್ಳಬಹುದು.

೩) ಲೇಖನಗಳ ಸೂಚೀಕರಣ : ಲೇಖನಗಳನ್ನು ಆಯಾ ಲೇಖಕರ ಹೆಸರಿನಲ್ಲಿ ಉಲ್ಲೇಖಿಸಿದ್ದೇವೆ. ಹೆಸರನ್ನು ಉಲ್ಲೇಖಿಸುವಾಗ ಸಾಹಿತ್ಯ ಕ್ಷೇತ್ರದಲ್ಲಿ ಪ್ರಚಾರದಲ್ಲಿದ್ದ ಆ ಲೇಖಕನ ಹೆಸರನ್ನೇ ಎತ್ತಿಕೊಂಡಿದ್ದೇವೆ. ಉತ್ತರ ಕರ್ನಾಟಕದ ಲೇಖಕರ ಹೆಸರುಗಳನ್ನು ಸಾಮಾನ್ಯವಾಗಿ ಅಡ್ಡಹೆಸರಿನಿಂದ ಪ್ರಾರಂಭಿಸಿದ್ದೇವೆ. ಹಳೇ ಮೈಸೂರಿನ ಲೇಖಕರ ಹೆಸರುಗಳನ್ನು ಅವರ ವೈಯಕ್ತಿಕ ಹೆಸರಿನಿಂದ ಪ್ರಾರಂಭಿಸಿದ್ದೇವೆ.

ಉದಾ : ಉತ್ತರ ಕರ್ನಾಟಕ

ಹಳಕಟ್ಟಿ (ಫ.ಗು.)
ನಂದೀಮಠ (ಎಸ್.ಸಿ.)
ಮಾಳವಾಡ (ಸ.ಸ.)
ಕುಂದಣಗಾರ (ಕೆ.ಜಿ.)

ದಕ್ಷಿಣ ಕರ್ನಾಟಕ

ಶಿವಮೂರ್ತಿ ಶಾಸ್ತ್ರಿ (ಬಿ.)
ನಂಜುಂಡಾರಾಧ್ಯ (ಎಂ.ಬಿ.)
ಮಲ್ಲಪ್ಪ (ಮ.)
ಶ್ರೀನಿವಾಸ ಮೂರ್ತಿ (ಎಂ.ಆರ್.)

ನಮ್ಮ ಸೂಚಿಯಲ್ಲಿ ಅನೇಕ ಲೇಖನಗಳು ಗುಪ್ತನಾಮದಲ್ಲಿ ಪ್ರಕಟವಾಗಿವೆ.

'ಓರ್ವ ವೀರಶೈವ'
'ಓರ್ವ ಸಮಾಜ ಸೇವಕ'
'ಶಿವಸುತ'
'ಮಧುರಚೆನ್ನ'
'ಸಮಾಜದ ಶಿಸು'
'ಓರ್ವ ವೀರಶೈವಾಭಿಮಾನಿ'

ಇತ್ಯಾದಿ ಪದಗಳನ್ನು ನಾವು ಲೇಖಕರೆಂದೇ ಭಾವಿಸಿ ಉಲ್ಲೇಖಗಳನ್ನು ಸಿದ್ಧಪಡಿಸಿದ್ದೇವೆ. ಕಂಸಿನಲ್ಲಿ 'ಗು.ನಾ.' ಎಂದು ಸಂಕ್ಷೇಪ ಅಕ್ಷರಗಳನ್ನು 'ಗುಪ್ತನಾಮ' ಎನ್ನುವದಕ್ಕೆ ಬದಲಾಗಿ ನಮೂದಿಸಿದ್ದೇವೆ.

ಹಳಕಟ್ಟಿಯವರು ತಮ್ಮ ೨೫ನೇ ವರುಷದ ವರದಿಯಲ್ಲಿ ಕವಿತೆ, ನಾಟಕ, ಕಾದಂಬರಿ ಇತ್ಯಾದಿಗಳಿಗೆ ಶಿವಾನುಭವದಲ್ಲಿ ಹೆಚ್ಚಾಗಿ ಸ್ಥಳಾವಕಾಶವನ್ನು ಕೊಟ್ಟಿಲ್ಲವೆಂದು ಹೇಳಿರುವರಾದರೂ ಅನಿವಾರ್ಯ ಸಂದರ್ಭಗಳಲ್ಲಿ ವಿದ್ವಾಂಸರ ಕವನಗಳನ್ನು

| | | |
|---|---|---|
| ೫೦೦ | ಸೃಷ್ಟಿ ವಿಜ್ಞಾನ | ಲೇಖನಗಳು |
| ೬೦೦ | ತಾಂತ್ರಿಕ ವಿಜ್ಞಾನ | ,, |
| ೭೦೦ | ಕಲೆ | ,, |
| ೮೦೦ | ಸಾಹಿತ್ಯ | ,, |
| ೯೦೦ | ಇತಿಹಾಸ | ,, |

ಅನಂತರ ಪ್ರತಿಯೊಂದು ಪ್ರಮುಖ ವಿಷಯ ವಿಭಾಗದಲ್ಲಿಯ ಲೇಖನಗಳನ್ನು ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನಾಗಿ ಪುನಃ ಪ್ರತ್ಯೇಕಿಸಿದ್ದೇವೆ. ಅವುಗಳ ವರ್ಗಾಂಕಗಳನ್ನು ಮತ್ತು ಪದಗಳನ್ನು ಪ್ರಸ್ತುತ ಲೇಖನಸೂಚಿಯಲ್ಲಿ ಮುಖ್ಯ ತಲೆಬರಹವನ್ನಾಗಿ ಕೊಟ್ಟಿದ್ದೇವೆ. ಅದರ ಕೆಳಗೆ ಆ ವಿಷಯಕ್ಕೆ ಸಂಬಂಧಿಸಿದ ಲೇಖಕರ ಹೆಸರಿನೊಂದಿಗೆ ಲೇಖನಗಳನ್ನು ವರ್ಣಾನುಕ್ರಮವಾಗಿ ಜೋಡಿಸಿದ್ದೇವೆ. ಅಂದರೆ ಈ ವಿಭಜನೆಯಲ್ಲಿ ವರ್ಗಾಂಕಗಳು ಮತ್ತು ವಿಷಯ ಸೂಚಿಸುವ ಪದಗಳು ಆಯಾ ಗುಂಪಿನ ಶಿರೋನಾಮಗಳಾಗಿ ಉಪಯೋಗಿಸಲ್ಪಟ್ಟಿವೆ. ಹೀಗೆ ಉಪಯೋಗಿಸಲ್ಪಟ್ಟ ವರ್ಗಾಂಕ ಮತ್ತು ವಿಷಯಗಳನ್ನು ಆಯಾ ವಿಷಯದಲ್ಲಿ ಬರುವ ಒಟ್ಟು ಲೇಖನಗಳನ್ನು ಪರಿವಿಡಿಯಲ್ಲಿ ಅವಲೋಕಿಸಿ ಅರಿತುಕೊಳ್ಳಬಹುದು.

ಓದುಗರ ತಿಳಿವಳಿಕೆಗಾಗಿ ಒಂದು ಉದಾಹರಣೆಯನ್ನು ಇಲ್ಲಿ ಕೊಟ್ಟಿದ್ದೇವೆ.

| ವರ್ಗಾಂಕ | | ಸೂಕ್ಷ್ಮವಿಷಯ ಶೀರ್ಷಿಕೆಗಳು |
|---|---|---|
| ೨೦೦ | : | ವೀರಶೈವ (ಲಿಂಗಾಯತ) ಧರ್ಮ |
| ೨೧೦ | : | ಅಷ್ಟಾವರಣಗಳು |
| ೨೨೦ | : | ಪಂಚಾಚಾರಗಳು |
| ೨೩೦ | : | ಷಟ್‌ಸ್ಥಲಗಳು |

ಮೇಲಿನ ೩ ಪ್ರಮುಖ ವಿಷಯಗಳಲ್ಲಿ ಅಷ್ಟಾವರಣಗಳನ್ನು ಕೆಳಗಿನಂತೆ ಪುನಃ ವಿಭಜಿಸಿದ್ದೇವೆ.

| ವರ್ಗಾಂಕ | ಸೂಕ್ಷ್ಮಾತಿಸೂಕ್ಷ್ಮ ವಿಷಯ ಶೀರ್ಷಿಕೆಗಳು | ಈ ಸೂಚಿಯ ಲೇಖನ ಕ್ರಮಾಂಕ | ಒಟ್ಟು ಲೇಖನಗಳು |
|---|---|---|---|
| ೨೧೦ | ಅಷ್ಟಾವರಣ (ಸಾಮಾನ್ಯ) | ೨೧೦–೨೨೫ | ೧೭ |
| ೨೧೧ | ಗುರು | ೨೨೬–೨೩೩ | ೮ |
| ೨೧೨ | ಲಿಂಗ | ೨೩೪–೩೦೧ | ೬೬ |
| ೨೧೩ | ಜಂಗಮ | ೩೦೨–೩೦೮ | ೭ |
| ೨೧೪ | ಪಾದೋದಕ | ೩೦೯–೩೧೮ | ೧೦ |
| ೨೧೫ | ಪ್ರಸಾದ | ೩೧೯–೩೨೨ | ೪ |
| ೨೧೬ | ವಿಭೂತಿ | ೩೨೩–೩೨೪ | ೨ |
| ೨೧೭ | ರುದ್ರಾಕ್ಷಿ | ೩೨೫ | ೧ |
| ೨೧೮ | ಮಂತ್ರ | ೩೨೬–೩೩೪ | ೯ |
| | | ಒಟ್ಟು ಲೇಖನ ಸಂಖ್ಯೆ | ೧೨೪ |



ಅಷ್ಟಾವರಣ ಕುರಿತ ಒಟ್ಟು ೧೨೪ ಲೇಖನಗಳು ಶಿವಾನುಭವದಲ್ಲಿ ಪ್ರಕಟವಾಗಿವೆ. ಅನುಕ್ರಮ ನಂಬರುಗಳನ್ನು ನೋಡಿ ಲೇಖನದ ಲೇಖಕ ಮತ್ತು ವಿಷಯವನ್ನು ಅರಿತುಕೊಳ್ಳಬಹುದು.

೩) ಲೇಖನಗಳ ಸೂಚೀಕರಣ : ಲೇಖನಗಳನ್ನು ಆಯಾ ಲೇಖಕರ ಹೆಸರಿನಲ್ಲಿ ಉಲ್ಲೇಖಿಸಿದ್ದೇವೆ. ಹೆಸರನ್ನು ಉಲ್ಲೇಖಿಸುವಾಗ ಸಾಹಿತ್ಯ ಕ್ಷೇತ್ರದಲ್ಲಿ ಪ್ರಚಾರದಲ್ಲಿದ್ದ ಆ ಲೇಖಕನ ಹೆಸರನ್ನೇ ಎತ್ತಿಕೊಂಡಿದ್ದೇವೆ. ಉತ್ತರ ಕರ್ನಾಟಕದ ಲೇಖಕರ ಹೆಸರುಗಳನ್ನು ಸಾಮಾನ್ಯವಾಗಿ ಅಡ್ಡಹೆಸರಿನಿಂದ ಪ್ರಾರಂಭಿಸಿದ್ದೇವೆ. ಹಳೇ ಮೈಸೂರಿನ ಲೇಖಕರ ಹೆಸರುಗಳನ್ನು ಅವರ ವೈಯಕ್ತಿಕ ಹೆಸರಿನಿಂದ ಪ್ರಾರಂಭಿಸಿದ್ದೇವೆ.

ಉದಾ : ಉತ್ತರ ಕರ್ನಾಟಕ

ಹಳಕಟ್ಟಿ (ಫ.ಗು.)

ನಂದೀಮಠ (ಎಸ್.ಸಿ.)

ಮಾಳವಾಡ (ಸ.ಸ.)

ಕುಂದಣಗಾರ (ಕೆ.ಜಿ.)

ದಕ್ಷಿಣ ಕರ್ನಾಟಕ

ಶಿವಮೂರ್ತಿ ಶಾಸ್ತ್ರಿ (ಬಿ.)

ನಂಜುಂಡಾರಾಧ್ಯ (ಎಂ.ಬಿ.)

ಮಲ್ಲಪ್ಪ (ಮ.)

ಶ್ರೀನಿವಾಸ ಮೂರ್ತಿ (ಎಂ.ಆರ್.)

ನಮ್ಮ ಸೂಚಿಯಲ್ಲಿ ಅನೇಕ ಲೇಖನಗಳು ಗುಪ್ತನಾಮದಲ್ಲಿ ಪ್ರಕಟವಾಗಿವೆ.

'ಓರ್ವ ವೀರಶೈವ'

'ಓರ್ವ ಸಮಾಜ ಸೇವಕ'

'ಶಿವಸುತ'

'ಮಧುರಚೆನ್ನ'

'ಸಮಾಜದ ಶಿಸು'

'ಓರ್ವ ವೀರಶೈವಾಭಿಮಾನಿ'

ಇತ್ಯಾದಿ ಪದಗಳನ್ನು ನಾವು ಲೇಖಕರೆಂದೇ ಭಾವಿಸಿ ಉಲ್ಲೇಖಗಳನ್ನು ಸಿದ್ಧಪಡಿಸಿದ್ದೇವೆ. ಕಂಸಿನಲ್ಲಿ 'ಗು.ನಾ.' ಎಂದು ಸಂಕ್ಷೇಪ ಅಕ್ಷರಗಳನ್ನು 'ಗುಪ್ತನಾಮ' ಎನ್ನುವದಕ್ಕೆ ಬದಲಾಗಿ ನಮೂದಿಸಿದ್ದೇವೆ.

ಹಳಕಟ್ಟಿಯವರು ತಮ್ಮ ೨೫ನೇ ವರುಷದ ವರದಿಯಲ್ಲಿ ಕವಿತೆ, ನಾಟಕ, ಕಾದಂಬರಿ ಇತ್ಯಾದಿಗಳಿಗೆ ಶಿವಾನುಭವದಲ್ಲಿ ಹೆಚ್ಚಾಗಿ ಸ್ಥಳಾವಕಾಶವನ್ನು ಕೊಟ್ಟಿಲ್ಲವೆಂದು ಹೇಳಿರುವರಾದರೂ ಅನಿವಾರ್ಯ ಸಂದರ್ಭಗಳಲ್ಲಿ ವಿದ್ವಾಂಸರ ಕವನಗಳನ್ನು

ಸಾಕಷ್ಟು ಸಂಖ್ಯೆಯಲ್ಲಿ ಹಾಕಿದ್ದಾರೆ. ನಮ್ಮ ವಿಷಯ ಸೂಚಿಯನ್ನು ಅವಲೋಕಿಸಿದಾಗ (ಕ್ರಿ.ಸಂ. ೧೧೨೧ ರಿಂದ ೧೨೧೮) ೨೦೩ ಕವನಗಳು ಶಿವಾನುಭವದಲ್ಲಿ ಪ್ರಕಟವಾಗಿವೆ. ಕೆಲವು ಕವಿಗಳ ಹೆಸರು ಗೊತ್ತಾಗುವದಿಲ್ಲ. ಅಂಥವುಗಳನ್ನು ಹಳಕಟ್ಟಿಯವರ ಹೆಸರಿನಲ್ಲಿಯೇ ಪ್ರಶ್ನಾರ್ಥಕ ಚಿನ್ಹದೊಂದಿಗೆ ಉಪಯೋಗಿಸಿದ್ದೇವೆ. ಒಟ್ಟಿನಲ್ಲಿ ನಾವು ಉಪಯೋಗಿಸಿದ 'ವಿಷಯ ಸೂಚಿ' ಚೌಕಟ್ಟಿನಲ್ಲಿ ಬರುವ ಶೀರ್ಷಿಕೆಗಳನ್ನು ವಾಚಕರು ಗಮನಿಸಿ ಲೇಖನಗಳ ವಿವರಣೆಯನ್ನು ಅರಿತುಕೊಳ್ಳಬಹುದು.

ಒಬ್ಬ ಲೇಖಕನು ಸುದೀರ್ಘವಾದ ಲೇಖನವನ್ನು ಬರೆದಾಗ ಹಳಕಟ್ಟಿಯವರು ಅದನ್ನು ಧಾರಾವಾಹಿಯಾಗಿ ಬೇರೆ ಬೇರೆ ಸಂಚಿಕೆಗಳಲ್ಲಿ ಪ್ರಕಟಿಸುತ್ತಾ ಹೋಗಿರುವರು. ಹೀಗೆ ಖಂಡವಾಗಿ ಪ್ರಕಟವಾದ ಲೇಖನವನ್ನು ಒಂದೇ ಅಖಂಡ ಲೇಖನವನ್ನಾಗಿ ನಾವು ಗಣಿಸಿದ್ದೇವೆ.

ಅದೇ ರೀತಿ ಹಳಕಟ್ಟಿಯವರು ತಾವು ಪ್ರಕಟಬಯಸಿದ ವಚನ ಗ್ರಂಥಗಳನ್ನು ಸಹ ಖಂಡ ಖಂಡವಾಗಿ ಪ್ರತ್ಯೇಕ ಪುಟಗಳೊಂದಿಗೆ ಅನೇಕ ಸಂಚಿಕೆಗಳಲ್ಲಿ ಪ್ರಕಟಿಸಿದ್ದುಂಟು. ಹೀಗೆ ಸುಮಾರು ೮೮ ಪುಸ್ತಕಗಳು ಶಿವಾನುಭವದಲ್ಲಿ ಖಂಡ ಲೇಖನ ರೂಪದಲ್ಲಿ ಮೊದಲು ಪ್ರಕಟವಾಗಿ ತದನಂತರ ಪ್ರತ್ಯೇಕ ಪರಿಪೂರ್ಣ ಪುಸ್ತಕಗಳಾಗಿ ಬೆಳಕು ಕಂಡಿವೆ.

ಉದಾಹರಣೆಗೆ :

ಹರಿಹರನ ರಗಳೆಗಳು
ಶಿವಶರಣ ಚರಿತ್ರೆಗಳು
ವಚನಶಾಸ್ತ್ರಸಾರ ಭಾಗ ೩ ಇತ್ಯಾದಿ.

ಹಳಕಟ್ಟಿಯವರ ಕೆಲವು ಗ್ರಂಥಗಳು ಶಿವಾನುಭವದಲ್ಲಿ ಪ್ರಕಟವಾದರೂ ಸಹ ಅವು ಪ್ರತ್ಯೇಕ ಗ್ರಂಥಗಳಾಗಿ ಹೊರ ಬಂದಂತೆ ತೋರುವದಿಲ್ಲ.

ಅಂಥವುಗಳಲ್ಲಿ
ಬಸವೇಶ್ವರ ಚರಿತ್ರೆ
ಬ್ರಾಹ್ಮಣ ಶಿವಶರಣರ ಚರಿತ್ರೆಗಳು
ವೀರಶೈವ ಅರಸು ಮನೆತನಗಳು ಇತ್ಯಾದಿ.

ಶಿವಾನುಭವದಲ್ಲಿ ಹಳಕಟ್ಟಿಯವರ ಲೇಖನಗಳು ಮತ್ತು ಪುಸ್ತಕಗಳು ಅಗ್ರಸ್ಥಾನ ಪಡೆದಿರುವದನ್ನು ವಾಚಕರು ಗಮನಿಸಬಹುದು.

೪) ವಿಷಯ ಪರಿವಿಡಿ : ಈ ಲೇಖನ ಸೂಚಿಯ 'ವಿಷಯ ಪರಿವಿಡಿ'ಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಶಿವಾನುಭವದಲ್ಲಿ ಪ್ರಕಟವಾದ ವೈವಿಧ್ಯಮಯ ಲೇಖನಗಳ ಪರಿಚಯವಾಗುತ್ತದೆ. ಮುಂಬರುವ ಸಂಶೋಧಕರು ಈ ಎಲ್ಲ ಲೇಖನಗಳನ್ನು ಅಭ್ಯಸಿಸಿ ತಮ್ಮ ಹೊಸ ಸಂಶೋಧನೆಯನ್ನು ಮುಂದುವರೆಸಬೇಕಾದ



ಅಗತ್ಯವಿದೆ. ಶಿವಾನುಭವ ಪತ್ರಿಕೆಯ ೩೫ ಸಂಪುಟಗಳನ್ನು ಕಳೆದ ಐದಾರು ವರುಷಗಳಲ್ಲಿ ಸಂಗ್ರಹಿಸಬೇಕಾದರೆ ನಮಗಾದ ಪರಿಶ್ರಮ ಅಷ್ಟಿಷ್ಟಲ್ಲ. ಅನೇಕ ವಾಚನಾಲಯಗಳಿಗೆ ಭೆಟ್ಟಿಯಿತ್ತು, ಸಂಶೋಧಕರೊಂದಿಗೆ ಪತ್ರ ವ್ಯವಹಾರ ಮಾಡಿ, ಪತ್ರಿಕೆಗಳಿಗೆ ಪ್ರಕಟಣೆಯನ್ನು ಕೊಟ್ಟು ಶಿವಾನುಭವದ ೩೫ ಸಮಗ್ರ ಸಂಪುಟಗಳನ್ನು ನಾವು ಈಗ ಸಂಗ್ರಹಿಸಿದ್ದೇವೆಂಬ ತೃಪ್ತಿ ನಮಗಿದೆ. ಅವುಗಳನ್ನು ಆಧರಿಸಿಯೇ ಈ ಪರಿಪೂರ್ಣ ಲೇಖನ ಸೂಚಿಯನ್ನು ಸಿದ್ಧಪಡಿಸಿದ್ದೇವೆ. ಇಷ್ಟಾದರೂ ಸಹ ಕಣ್ತಪ್ಪಿನಿಂದ ಈ ಸೂಚಿಸಿದ್ಧವಾದ ನಂತರ ಕೆಲವು ಲೇಖನಗಳು ಲಭ್ಯವಾದವು. ಅವುಗಳ ಪಟ್ಟಿಯನ್ನು ಅನುಬಂಧದಲ್ಲಿ ಜೋಡಿಸಿದ್ದೇವೆ. ಕರ್ನಾಟಕದ ಯಾವ ಗ್ರಂಥಾಲಯದಲ್ಲಿಯೂ ಶಿವಾನುಭವ ಸಂಪುಟಗಳು ಸಂಪೂರ್ಣವಾಗಿ ಲಭ್ಯವಿಲ್ಲ. ಆದರೆ ನಮ್ಮ ಗ್ರಂಥಾಲಯದಲ್ಲಿ ಎಲ್ಲ ಸಂಪುಟಗಳು ಲಭ್ಯವಿವೆಯೆಂದು ಹೇಳಲು ಹೆಮ್ಮೆಯೂ, ಸಂತೋಷವೂ ಏಕಕಾಲಕ್ಕೆ ಉಂಟಾಗುತ್ತವೆ.

ವಿಷಯ ಸ್ಪಷ್ಟತೆಗಾಗಿ ಒಂದು ವಿಷಯಕ್ಕೆ ಸಂವಾದಿಯಾದ ಇನ್ನೂ ಕೆಲವು ಸಮಾನ ಪದಗಳನ್ನು ಬಳಸಿಕೊಂಡಿದ್ದೇವೆ.

ಉದಾ :

೧) 'ಐಕ್ಯಸ್ಥಲ'ಕ್ಕೆ : ಶಿವಯೋಗ, ಅನುಭಾವ, ಯೋಗ, ಮುಕ್ತಿ ಲಿಂಗಾಂಗ ಸಾಮರಸ್ಯ ಇವು ಸಮಾನ ಪದಗಳೆಂದು ಗ್ರಹಿಸಿದ್ದೇವೆ.

೨) 'ಲಿಂಗಾಯತ ಧರ್ಮ' : 'ವೀರಶೈವ ಧರ್ಮ', 'ಶಕ್ತಿವಿಶಿಷ್ಟಾದ್ವೈತ' ಇವು ಸಮಾನ ಪದಗಳಾಗಿ ಬಳಸಿಕೊಂಡಿದ್ದೇವೆ.

೩) 'ಅನುಭವ ಮಂಟಪ'ವನ್ನು : ಕ್ರಾಂತಿಕೇಂದ್ರ, ಸ್ವಾತಂತ್ರ್ಯ, ಬಂಡಾಯ, ಪ್ರತಿಭಟನೆ– ಈ ಅರ್ಥದಲ್ಲಿ ಬಳಸಿದ್ದೇವೆ.

೪) ಭಾಷಣ, ಪ್ರಬಂಧ, ಆಶೀರ್ವಚನ, ಸ್ಫುಟ ವಿಷಯ, ಆತ್ಮ ನಿವೇದನ– ಇವುಗಳನ್ನು ಒಂದೆಡೆ ಬರುವಂತೆ ವರ್ಗೀಕರಿಸಿದ್ದೇವೆ.

೫) ಲೇಖಕ ಸೂಚಿ : ಲೇಖನ ಸೂಚಿಯ ಕೊನೆಗೆ 'ಲೇಖಕ ಸೂಚಿ'ಯೊಂದನ್ನು ಅಳವಡಿಸಿದ್ದೇವೆ. ಇದು ವರ್ಣಾನುಕ್ರಮವಾಗಿದ್ದು ಪ್ರತಿಯೊಬ್ಬ ಲೇಖಕನ ಹೆಸರಿನ ಮುಂದೆ ಅವನು ಬರೆದ ಲೇಖನಗಳ ಅನುಕ್ರಮ ಸಂಖ್ಯೆಯನ್ನು ಕೊಟ್ಟಿದ್ದೇವೆ. ಈ ಲೇಖಕ ಸೂಚಿಯನ್ನು ಸ್ಥೂಲವಾಗಿ ಅವಲೋಕಿಸಿದರೆ– ಒಂದೇ ಲೇಖನವನ್ನು ಬರೆದವರು ೨೮೪; ೧೦ ರಿಂದ ೨೫ ರ ವರೆಗೆ ಲೇಖನಗಳನ್ನು ಬರೆದವರು ೧೩ ; ೨೫ ಕ್ಕಿಂತ ಹೆಚ್ಚು ಲೇಖನ ಬರೆದವರು ೬ ಬರಹಗಾರರು ಇರುವದು ಕಂಡು ಬರುತ್ತದೆ. ಶಿವಾನುಭವದಲ್ಲಿ ಹೆಚ್ಚು ಲೇಖನಗಳನ್ನು ಬರೆದವರಲ್ಲಿ :

| | | |
|---|---|---|
| ಹಳಕಟ್ಟಿ (ಫ.ಗು.) | ೩೩೮ | ಲೇಖನಗಳು |
| ಶಿವಾನಂದಸ್ವಾಮಿಗಳು | ೬೯ | ,, |
| ಗವಿಮಠ, ತೆಗ್ಗಿಹಳ್ಳಿ | | |

| | | |
|---|---|---|
| ಈಶ್ವರ ಸಣಕಲ್ಲ | ೬೩ | ಲೇಖನಗಳು |
| ವಿರಕ್ತಮಠ | ೫೮ | '' |
| ಅನ್ನದಾನೀಶ್ವರ | | |
| ಮಲ್ಲಪ್ಪ (ಮ) | ೫೨ | '' |
| ಪಟ್ಟೇದ (ಬ.ಚ.) | ೪೫ | '' |
| ಮಹಾಂತಣ್ಣವರ (ಸಿ.ನಾ.) | ೪೫ | '' |
| ಬ್ಯಾಳಿ (ಕಲ್ಯಾಣಪ್ಪ) | ೪೧ | '' |
| ಶಿವಮೂರ್ತಿಶಾಸ್ತ್ರಿ (ಬಿ.) | ೨೯ | '' |

ಹೀಗೆ ಲೇಖನಗಳನ್ನು ಈ ೯ ಜನ ಕ್ರಮವಾಗಿ ಬರೆದಿರುವರು. ಶಿವಾನಂದ ಸ್ವಾಮಿಗಳು ಗವಿಮಠ, ಈಶ್ವರ ಸಣಕಲ್ಲ, ಇವರ ಲೇಖನಗಳನ್ನು ಶಿವಾನಂದಸ್ವಾಮಿಗಳು ತೆಗ್ಗಿಹಳ್ಳಿ ಎಂಬುದಾಗಿಯೂ, ಸಣಕಲ್ಲ (ಈಶ್ವರ) ಎಂಬುದಾಗಿಯೂ ಎರಡು ಸ್ಥಳಗಳಲ್ಲಿ ಬರೆಯಲಾಗಿದೆ.

ನಾವು ಎಷ್ಟೇ ಎಚ್ಚರವಹಿಸಿ ಈ ಲೇಖನಸೂಚಿಯನ್ನು ಸಿದ್ಧಪಡಿಸಿದರೂ ಕೆಲವು ದೋಷಗಳು ಉಳಿದಿವೆ. ಮುಂದಿನ ಆವೃತ್ತಿಯಲ್ಲಿ ಅವುಗಳನ್ನು ಸರಿಪಡಿಸಿಕೊಳ್ಳಲಾಗುವದು.

ಈ ಲೇಖನಸೂಚಿಯನ್ನು ಸಿದ್ಧಪಡಿಸುವಲ್ಲಿ ನಮಗೆ ಮೂಲ ಪ್ರೇರಕ ಶಕ್ತಿಯಾಗಿ, ಸ್ಫೂರ್ತಿಯ ನೆಲೆಯಾಗಿ ನಿಂತು ಮಾರ್ಗದರ್ಶನ ಮಾಡಿದ, ಬೆಳಗಾವಿ ನಾಗನೂರು ಶ್ರೀ ರುದ್ರಾಕ್ಷಿಮಠದ ಅಧಿಪತಿಗಳಾದ ಶ್ರೀ ಮ.ನಿ.ಪ್ರ. ಸಿದ್ಧರಾಮ ಮಹಾಸ್ವಾಮಿಗಳವರಿಗೆ ನಮ್ಮ ಅನಂತಾನಂತ ಶಿರಸಾಷ್ಟಾಂಗ ನಮಸ್ಕಾರಗಳು.

ನಾವು ಈ ಸೂಚಿಯನ್ನು ಸಿದ್ಧಪಡಿಸಿ ಮೂರು ವರ್ಷಗಳಾಗಿತ್ತು. ಆದರ ಪ್ರಕಟಣೆಯ ಯೋಗ ಕೂಡಿಬಂದಿರಲಿಲ್ಲ. ಶ್ರಮವಹಿಸಿ ಸಿದ್ಧಪಡಿಸಿದ ಈ ಕಾರ್ಯ ಪರಿಪೂರ್ಣವಾಗಲಿಲ್ಲವೆಂದು ವಿಷಾದವೆನಿಸಿತು. ಯೋಗಾಯೋಗದಿಂದ ಒಂದು ದಿನ ವಿಜಾಪುರದಿಂದ ಆಕಸ್ಮಿಕವಾಗಿ ಡಾ. ಎಂ. ಎಸ್. ಮದಭಾವಿ ಮತ್ತು ಪ್ರಿ. ವಿ. ಎಮ್. ಸುರಪುರ ಅವರು ನಮ್ಮ ಗ್ರಂಥಾಲಯಕ್ಕೆ ಬಂದು, 'ನಾವು ಡಾ. ಹಳಕಟ್ಟಿ ಸ್ಮಾರಕ ಭವನದ ಉದ್ಘಾಟನೆಯನ್ನು ಇಟ್ಟುಕೊಂಡಿದ್ದೇವೆ. ಕಾರ್ಯಕ್ರಮ ಅಭೂತ ಪೂರ್ವವಾಗಿ ಜರುಗಬೇಕು. ಅದಕ್ಕೆ ನಿಮ್ಮ ಸಲಹೆ–ಸೂಚನೆಗಳು ಬೇಕು' ಎಂದು ಕೇಳಿದರು. ನಾನು ಪ್ರಸ್ತುತ ಗ್ರಂಥದ ಹಸ್ತಪ್ರತಿಯನ್ನು ಮುಂದಿಟ್ಟೆ. ಅವರು ಹಸ್ತಪ್ರತಿಯನ್ನು ನೋಡಿ ಸಂತೋಷಪಟ್ಟರು. 'ನಾವು ಸಂಸ್ಥೆಯಿಂದ ಇದನ್ನು ಪ್ರಕಟಿಸುತ್ತೇವೆ. ಆದಷ್ಟು ಬೇಗ ಮುದ್ರಣವಾಗಲಿ' ಎಂದು ಹೇಳಿ ಹಣವನ್ನು ಮರುವಾರವೇ ಕಳಿಸಿಕೊಟ್ಟರು. ಬಿ.ಎಲ್.ಡಿ.ಇ. ಸಂಸ್ಥೆಯ ಅಧ್ಯಕ್ಷರಾದ ಮಾನ್ಯಶ್ರೀ ಬಿ.ಎಸ್. ಪಾಟೀಲ (ಕುಮಠೆ), ಚೇರಮನ್‌ರಾದ ಮಾನ್ಯಶ್ರೀ ಬಿ.ಆರ್. ಪಾಟೀಲ (ಲಿಂಗದಳ್ಳಿ) ಹಾಗೂ ಪ್ರಧಾನ ಕಾರ್ಯದರ್ಶಿಗಳಾದ ಮಾನ್ಯಶ್ರೀ ಎಮ್.ಬಿ. ಪಾಟೀಲ ಅವರು ಬಹಳಷ್ಟು ಶ್ರದ್ಧೆ–ನಿಷ್ಠೆಯಿಂದ ಈ ಕಾರ್ಯಕ್ಕೆ ಮುಂದಾದರು. ಬಿ.ಎಲ್.ಡಿ.ಇ. ಸಂಸ್ಥೆಯ ಅಧ್ಯಕ್ಷರಿಗೂ, ಚೇರಮನ್‌ರಿಗೂ, ಪ್ರಧಾನ ಕಾರ್ಯದರ್ಶಿಗಳಿಗೂ ಹಾಗೂ ಪದಾಧಿಕಾರಿಗಳಿಗೂ ನನ್ನ ಕೃತಜ್ಞತೆಗಳು.



ಗ್ರಂಥವನ್ನು ಅತ್ಯಂತ ಸುಂದರವಾಗಿ ಮುದ್ರಿಸಿದ ತ್ವರಿತ ಮುದ್ರಣಾಲಯದ ಸಂಚಾಲಕರಾದ ಕೆ. ಅಶೋಕ ಅವರಿಗೂ ಅವರ ಸಿಬ್ಬಂದಿಗೂ ಕೃತಜ್ಞತೆಗಳು.

ಬೆಳಗಾವಿ
೨೫–೬–೨೦೦೨

— ಎಸ್. ಆರ್. ಗುಂಜಾಳ

## ಉಪಕಾರ ಸ್ಮರಣೆ

### ಲೇಖನ ಸೂಚಿ ಸಿದ್ಧಪಡಿಸುವಲ್ಲಿ ಸಹಾಯ ಮಾಡಿದವರು

೧. ಶ್ರೀ ವ್ಹಿ. ಡಿ. ರಾಚನಾಯಕರ
೨. ಕು. ವಂದನಾ ಪವಾರ
೩. ಶ್ರೀಮತಿ ರತ್ನಾ ಪುರಾಣಿಕಮಠ
೪. ಶ್ರೀ ರಾಜು ಧನವಾಡೆ
೫. ಶ್ರೀ ಚನ್ನಪ್ಪ ಕಿತ್ತೂರ
೬. ಶ್ರೀ ರವಿ ಗಡದವರ
೭. ಶ್ರೀ ಶಿವಾನಂದ ನಿರ್ವಾಣಿಮಠ
೮. ಶ್ರೀ ಪ್ರಕಾಶ ಗಿರಿಮಲ್ಲನವರ

ಇವರಿಗೆಲ್ಲ ಕೃತಜ್ಞತೆಗಳು

—ಎಸ್. ಆರ್. ಗುಂಜಾಳ

# ವಿಷಯ ಪರಿವಿಡಿ

■■

# ವರ್ಗೀಕೃತ ಲೇಖನ ಸೂಚಿ

■■

# ವರ್ಗೀಕೃತ ಲೇಖನ ಸೂಚಿ

## ಡಾ. ಫ. ಗು. ಹಳಕಟ್ಟಿ ಸಂಪಾದಿತ

# ಶಿವಾನುಭವ ಪತ್ರಿಕೆಯ

(೧೯೨೬–೧೯೬೨)

## ವರ್ಗೀಕೃತ ಲೇಖನಸೂಚಿ

---

### ೦೦೧ : ಶಾಸನಗಳು

೧) ಕುಂದಣಗಾರ (ಕೆ.ಜಿ.)

ಕೊಕಟನೂರ ಚಂದ್ರಶೇಖರ ದೇವಾಲಯದ ಶಿಲಾಶಾಸನ. ಪು : ೫೦೫-೫೧೦, ಶಿವಾನುಭವ : ೧೩, ೧೨. ಸಪ್ಟಂಬರ ೧೯೩೯.

೨) ಕೊಪ್ಪಳ (ವೀರಭದ್ರಪ್ಪ)

ಪುಲಿಗೆರೆ (ಲಕ್ಷ್ಮೇಶ್ವರ) ಯಲ್ಲಿ ಹೊಸದಾಗಿ ದೊರೆತ ಶಿಲಾಶಾಸನವು. ಪು : ೧೨೭-೧೩೧, ಶಿವಾನುಭವ : ೪, ೩. ಜೂನ ೧೯೨೯.

೩) ಗಂಗಾಧರ

ಅಶೋಕನ ಶಿಲಾಲೇಖನದೊಳಗಿನ ಕೆಲವು ಲೇಖನಗಳು. ಪು : ೩೨೧-೩೩೦ ಶಿವಾನುಭವ : ೯, ೫. ಜನೇವರಿ ೧೯೩೫.

೪) ಚನ್ನಬಸವರಾಜ ದೇಶಿಕೇಂದ್ರಸ್ವಾಮಿಗಳು

ಕನ್ನಡ ಹಿರಿಮೆಯ ಕುರುಹು ಗಜಾಸನ. (ಬದಾಮಿಯಲ್ಲಿಯದು). ಪು : ೬೬-೬೭. ಶಿವಾನುಭವ : ೨೪, ೩. ಡಿಸೆಂಬರ ೧೯೪೯.

೫) ಜೀರಿಗೆ (ಬಸವಪ್ಪ)

ಮನಗೋಳಿಯ ಶಿಲಾಶಾಸನಗಳು. ಪು : ೩೦೪-೩೧೯. ಶಿವಾನುಭವ : ೧೩, ೮–೯. ಮೇ, ಜೂನ ೧೯೩೯.

೬) ನಂದೀಮಠ (ಎಸ್.ಸಿ)

ಸುಗ್ಗಲದೇವಿಯವರ ಶಿಲಾಶಾಸನವು. (ರಾಮದುರ್ಗ ತಾಲೂಕಿನ ಹಳ್ಳಿ) ಪು : ೨೧-೩೯. ಶಿವಾನುಭವ : ೩. ೧೧. ಸಪ್ಟಂಬರ ೧೯೨೮.

೭) ಚೌಡದಾನಪುರದ ಶಿಲಾಶಾಸನಗಳು. ಪು : ೭೬-೮೪. ಶಿವಾನುಭವ : ೪, ೨. ಮೇ ೧೯೨೯. ಪು : ೧೧೦-೧೧೮. ಶಿವಾನುಭವ : ೪, ೩. ಜೂನ ೧೯೨೯. ಪು : ೧೫೯–೧೭೩. ೧೧೦ ಶಿವಾನುಭವ : ೪, ೪. ಜುಲೈ ೧೯೨೯.

೮) ಕುರುಂಬೆಟ್ಟದ ಶಿಲಾಶಾಸನವು. ಪು : ೩೩೯-೩೯೪. ಶಿವಾನುಭವ : ೭ ೬. ಫೆಬ್ರುವರಿ ೧೯೩೩.

೯) ವಿರಕ್ತಮಠ (ಶಿವಯೋಗೀಂದ್ರರು)
ತೋಂಟದ ಸಿದ್ಧಲಿಂಗೇಶ್ವರರ ಎಡೆಯೂರ ಮಠದಲ್ಲಿರುವ ಶಿಲಾಲಿಪಿ. ಪು : ೧೨೬-೧೨೭. ಶಿವಾನುಭವ : ೭, ೨. ಜೂನ ೧೯೩೨.

೧೦) ಶಿವಬಸವಶಾಸ್ತ್ರಿಗಳು (ಬೃಹನ್ಮಠ, ಹೂಲಿ)
ಲಕ್ಷ್ಮೇಶ್ವರ ಶಿಲಾಶಾಸನದ ಸ್ಪಷ್ಟೀಕರಣವು. ಪು: ೨೬೫–೨೭೧. ಶಿವಾನುಭವ : ೪, ೬. ಸಪ್ಟಂಬರ ೧೯೨೯.

೧೧) ಹಳಕಟ್ಟಿ (ಫ.ಗು.)
ಅಗರಖೇಡದ ಶಿಲಾಶಾಸನವು. ಪು: ೯–೧೧ ಶಿವಾನುಭವ : ೧೬, ೧. ಅಕ್ಟೋಬರ ೧೯೪೧.

೧೨) ಅಮುಗಿದೇವ ಅಥವಾ ಅಮಾಕಸಿದ್ಧನ ಶಿಲಾಶಾಸನ ಪು : ೪೦೧–೪೨೦. ಶಿವಾನುಭವ : ೯, ೬. ಮಾರ್ಚ ೧೯೩೫.

೧೩) ಏಕಾಂತ ರಾಮಯ್ಯ ಮತ್ತು ಅಬ್ಬಲೂರ ಶಿಲಾಶಾಸನ. ಪು : ೮–೩೪. ಶಿವಾನುಭವ : ೩, ೧೨. ಡಿಸೆಂಬರ ೧೯೨೮.

೧೪) ಸಿದ್ಧರಾಮೇಶನ ಸಂಗನೂರ ಶಿಲಾಶಾಸನ. ಪು : ೮೦–೮೫ ಶಿವಾನುಭವ : ೧೩, ೨. ನವೆಂಬರ ೧೯೩೮.

೧೫) ಶಿಲಾಲೇಖಗಳಲ್ಲಿ ವೀರಶೈವ ಧರ್ಮದ ವಿವರಣೆ. ಪು: ೩೫೭–೩೬೫ ಶಿವಾನುಭವ : ೧೩–೧೦. ಜೂನ, ಜುಲೈ ೧೯೨೯.

೧೬) ವರದಾನಿ ಗುಡ್ಡಮ್ಮೆಯ ಶಿಲಾಶಾಸನ. ಪು : ೪೮೫–೪೯೦ ಶಿವಾನುಭವ : ೧೩, ೧೧. ಅಗಸ್ಟ ೧೯೩೯.

೧೭) ಸ್ಫುಟ ವಿಷಯಗಳು. (ಕಪಿಲಸಿದ್ಧಮಲ್ಲಿಕಾರ್ಜುನರ ಬಗ್ಗೆ ಕದಂಬ ರಾಜರ ಶಿಲಾ ಶಾಸನಗಳು ಬಿಜ್ಜಳರಾಯ ಇತ್ಯಾದಿ) ಪು : ೩೩೯–೩೪೮. ಶಿವಾನುಭವ : ೨೯, ೭. ಜುಲೈ ೧೯೫೫

## ೦೦೨ : ಹಸ್ತಪ್ರತಿಗಳು

೧೮) ನಂದೀಮಠ (ಎಸ್.ಸಿ)
ಕೈಬರಹದ ಗ್ರಂಥಗಳ ಶೋಧನೆಯು. ಪು : ೫೨–೬೨. ಶಿವಾನುಭವ : ೭, ೧. ಎಪ್ರೀಲ್ ೧೯೩೨



## ೦೦೪ : ಗ್ರಂಥಸೂಚಿ

೧೯) ಹಳಕಟ್ಟಿ (ಫ.ಗು)
ಹಿತಚಿಂತಕದಲ್ಲಿ ದೊರೆಯುವ ಗ್ರಂಥಗಳ ಪಟ್ಟಿ. ಪು : ೧–೬.
ಶಿವಾನುಭವ : ೨೭, ೮. ಅಗಸ್ಟ ೧೯೫೩ ಪು : ೧–೮.
ಶಿವಾನುಭವ : ೨೯, ೧೦. ಅಕ್ಟೋಬರ ೧೯೫೫

## ೦೦೪.೨ : ಲೇಖಕರ ಗ್ರಂಥಸೂಚಿ, ಕವಿಚರಿತ್ರೆ

೨೦) ಚಂದ್ರಶೇಖರದೇವರು (ಅಡ್ನೂರ)
ವೀರಶೈವ ಕವಿಗಳ ವೈಶಿಷ್ಟ್ಯ. ಪು : ೩೧೭–೩೨೩
ಶಿವಾನುಭವ : ೧೨, ೬. ಮಾರ್ಚ ೧೯೩೮

೨೧) ಜೀರಗೆ (ಬಸವಲಿಂಗಪ್ಪ)
ಬಸವಾದಿ ಪ್ರಮಥರಿಂದೀಚಿನ ಗ್ರಂಥಕಾರರ ವಿಷಯ ವ್ಯತ್ಯಾಸಗಳು ಪು : ೧೭–೨೦. ಶಿವಾನುಭವ : ೯, ೧. ಮೇ ೧೯೩೪

೨೨) ನಂಜುಂಡಾರಾಧ್ಯ (ಕೆ. ಸಿ)
ವೀರಶೈವ ಗ್ರಂಥಕಾರರು. ಪು : ೧೧೩–೧೧೯. ಶಿವಾನುಭವ : ೧೩, ೩. ಡಿಸೆಂಬರ ೧೯೩೮.

೨೩) ಶಿವಮೂರ್ತಿಶಾಸ್ತ್ರಿ (ಬಿ. ತುಮಕೂರ)
ಬೀಳಗಿಯ ಮಹಾಕವಿಗಳು. ಪು. ೫೯–೬೫. ಶಿವಾನುಭವ : ೨, ೬. ಜೂನ ೧೯೨೭.

೨೪) ಶಿವಮೂರ್ತಿ
ವಿಜಾಪೂರ ನಾಡಿನ ಸಾಹಿತಿಗಳು. ಪು : ೧೫೧–೧೫೬. ಶಿವಾನುಭವ : ೧೬, ೩. ಡಿಸೆಂಬರ ೧೯೪೧.

## ೦೦೪.೩ : ಲೇಖನಸೂಚಿ

೨೫) ಹಳಕಟ್ಟಿ (ಫ.ಗು)
ಈ ಸಂಚಿಕೆಯಲ್ಲಿಯ ಲೇಖನಗಳು. ಪು: ೬೧೩–೬೧೪ ಶಿವಾನುಭವ : ೧೨, ೧೧. ಅಗಸ್ಟ ೧೯೩೮

## ೦೦೪.೩೨ : ನಿಯತಕಾಲಿಕೆ ಲೇಖನಸೂಚಿ

೨೬) ಹಳಕಟ್ಟಿ (ಫ. ಗು)
ಅನುಕ್ರಮಣಿಕೆ. (ಸಂ.೫ ರಲ್ಲಿ ೧ ರಿಂದ ೧೨ ಸಂಚಿಕೆಗಳ ವಿಷಯಾನು

ಕ್ರಮಣಿಕೆ) ಪು. ೪೧೭–೪೨೦. ಶಿವಾನುಭವ : ೫, ೧೧, ೧೨ ಫೆಬ್ರುವರಿ, ಮಾರ್ಚ ೧೯೩೧.

## ೦೦೪.೪ : ಪತ್ರಿಕಾ ಸಾಹಿತ್ಯ

೨೭) ತೆನಿಹಳ್ಳಿ (ಸದಾಶಿವಪ್ಪ)
ಶಿವಾನುಭವವೂ ಕರ್ನಾಟಕವೂ. ಪು : ೧–೪. ಶಿವಾನುಭವ : ೧೩, ೧. ಅಕ್ಟೋಬರ ೧೯೩೮.

೨೮) ಮುಮ್ಮಿಗಟ್ಟಿ (ಶಾಂತವೀರ)
ಮುಂದುವರೆದ ಶಿವಾನುಭವ. ಪು: ೧೨೦–೧೨೪. ಶಿವಾನುಭವ: ೨೧, ೬. ಮಾರ್ಚ ೧೯೪೭.

೨೯) ಶಿವಪ್ಪಯ್ಯನಮಠ (ಚಂ.ಶ್ರೀ)
ಶಿವಾನುಭವ ಪತ್ರಿಕೆ ಸಲ್ಲಿಸಿದ ಸೇವೆಯು. ಪು : ೩೭೦–೩೭೭. ಶಿವಾನುಭವ : ೩೧, ೭. ಜುಲೈ ೧೯೫೭.

೩೦) ಶಿವಾನುಭವ ಪತ್ರಿಕೆಯು ಕನ್ನಡ ನಾಡಿಗೂ ವೀರಶೈವ ಸಮಾಜಕ್ಕೂ ಸಲ್ಲಿಸಿದ ಅಮೋಘ ಸೇವೆ. ಪು: ೨೯೭–೩೦೪. ಶಿವಾನುಭವ : ೩೨, ೬, ೭೮. ಜೂನ–ಅಗಸ್ಟ ೧೯೫೮.

೩೧) ಶಿವಾನಂದಸ್ವಾಮಿಗಳು (ತೆಗ್ಗಿಹಳ್ಳಿ)
ಶಿವಾನುಭವ ಸಂಘಟನೆ. ಪು : ೨೬೪–೨೬೫. (ಶಿವಾನುಭವ ಪತ್ರಿಕೆಗೆ ಸಹಾಯ). ಶಿವಾನುಭವ : ೨೮, ೧೦. ಅಕ್ಟೋಬರ ೧೯೫೪.

೩೨) ಹಳಕಟ್ಟಿ (ಫ.ಗು)
ಶಿವಾನುಭವ ಪತ್ರಿಕೆಯ ಉದ್ದೇಶ. ಪು : ೧–೪. ಶಿವಾನುಭವ : ೧, ೧. ಫೆಬ್ರುವರಿ ೧೯೨೬.

೩೩) ಶಿವಾನುಭವದ ೩ನೇ ವರ್ಷ. ಪು : ೧೧೪–೧೧೬. ಶಿವಾನುಭವ : ೩, ೯. ಮಾರ್ಚ ೧೯೨೮.

೩೪) ಶಿವಾನುಭವ ಪತ್ರಿಕೆಯ ೬ನೇ ವರ್ಷದ ಕಾರ್ಯಗಳು ಪು : ೩೬೩–೩೬೬. ಶಿವಾನುಭವ : ೬, ೬. ಫೆಬ್ರುವರಿ ೧೯೩೨.

೩೫) ಶಿವಾನುಭವ ಪತ್ರಿಕೆಯ ಪುನರ್ಘಟನೆ. ಪು: ೫೬೩–೫೬೭. ಶಿವಾನುಭವ : ೧೦, ೬. ಜುಲೈ ೧೯೩೬.

೩೬) ಶಿವಾನುಭವ ಪತ್ರಿಕೆಯ ೨೧ನೇ ವರ್ಷ. ಪು: ೧–೨ ಶಿವಾನುಭವ : ೨೧, ೧. ಅಕ್ಟೋಬರ ೧೯೪೬.



೩೭) ಪತ್ರಿಕೆಯ ೨೩ನೆಯ ವರ್ಷ. ಪು: ೧–೩. ಶಿವಾನುಭವ: ೨೩, ೧. ಅಕ್ಟೋಬರ ೧೯೪೮.

೩೮) ಶರಣ ಸಾಹಿತ್ಯ ಮಾಸಪತ್ರಿಕೆ. ಪು : ೨೫೫–೨೫೬. ಶಿವಾನುಭವ : ೧೨, ೪. ಜನೇವರಿ ೧೯೩೮.

೩೯) ಶಿವಾನುಭವ ಪತ್ರಿಕೆಯ ಕಾರ್ಯಗಳು. ಪು : ೨೬೬–೨೬೯. ಶಿವಾನುಭವ : ೨೪, ೮. ಸಪ್ಟಂಬರ ೧೯೫೦.

೪೦) ಶಿವಾನುಭವ ಪತ್ರಿಕೆಯ ಮುಂದಿನ ವಾಙ್ಮಯ ಕಾರ್ಯಗಳು. ಪು : ೪೨೩–೪೨೪. ಶಿವಾನುಭವ : ೨೯, ೮. ಅಗಸ್ಟ ೧೯೫೫.

## ೦೦೫.೧ : ವಿಷಯ ಶಬ್ದಕೋಶ

೪೧) ಮಹಾಂತಣ್ಣವರ (ಸಿ. ನಾ.)
ಶಿವಾನುಭವ ಶಬ್ದಕೋಶ. ಪು : ೩೮೯–೩೯೨. ಶಿವಾನುಭವ : ೧೭, ೧೧. ಅಗಸ್ಟ ೧೯೪೩.

೪೨) ಹಳಕಟ್ಟಿ (ಫ.ಗು)
ಶಿವಾನುಭವ ಶಬ್ದಕೋಶ.
ಪುಟ : ೧–೮. ಶಿವಾನುಭವ : ೧೪, ೧೦. ಜುಲೈ ೧೯೪೦.
ಪುಟ : ೯–೧೬ ಶಿವಾನುಭವ : ೧೪, ೧೧. ಅಗಸ್ಟ ೧೯೪೦
ಪುಟ : ೧೭–೨೪ ಶಿವಾನುಭವ : ೧೪, ೧೨. ಸಪ್ಟಂಬರ ೧೯೪೦
ಪುಟ : ೨೫–೩೨ ಶಿವಾನುಭವ : ೧೫, ೩. ಡಿಸೆಂಬರ ೨೯೪೦
ಪುಟ : ೩೩–೪೪ ಶಿವಾನುಭವ : ೧೫, ೪. ಜನೇವರಿ ೧೯೪೧
ಪುಟ : ೪೫–೫೨ ಶಿವಾನುಭವ : ೧೫, ೫. ಮಾರ್ಚ ೧೯೪೧
ಪುಟ : ೫೩–೬೦ ಶಿವಾನುಭವ : ೧೫, ೬. ಮಾರ್ಚ ೧೯೪೧
ಪುಟ : ೬೧–೬೮ ಶಿವಾನುಭವ : ೧೫, ೭. ಎಪ್ರೀಲ್ ೧೯೪೧
ಪುಟ : ೬೯–೭೬ ಶಿವಾನುಭವ : ೧೫, ೮, ೯. ಮೇ–ಜೂನ ೧೯೪೧
ಪುಟ : ೭೨–೮೪ ಶಿವಾನುಭವ : ೧೫, ೧೦, ೧೧. ಜುಲೈ, ಅಗಸ್ಟ ೧೯೪೧
ಪುಟ : ೧೦೯–೧೨೪ ಶಿವಾನುಭವ : ೧೬, ೮. ಮೇ ೧೯೪೨
ಪುಟ : ೧೨೫–೧೪೦ ಶಿವಾನುಭವ : ೧೬, ೯. ಜೂನ ೧೯೪೨
ಪುಟ : ೧೪೧–೧೪೮ ಶಿವಾನುಭವ : ೧೬, ೧೧. ಅಗಸ್ಟ ೧೯೪೨
ಪುಟ : ೧೪೯–೧೬೪ ಶಿವಾನುಭವ : ೧೬, ೧೨. ಸಪ್ಟಂಬರ ೧೯೪೨
ಪುಟ : ೧೬೫–೧೭೨ ಶಿವಾನುಭವ : ೧೭, ೨. ನವ್ಹಂಬರ ೧೯೪೨
ಪುಟಃ ೧೭೩–೧೮೦ ಶಿವಾನುಭವ : ೧೭, ೬ ಮಾರ್ಚ ೧೯೪೩
ಪುಟಃ ೧೯೩–೨೦೦ ಶಿವಾನುಭವ : ೧೭, ೯. ಜೂನ ೧೯೪೩.

## ೦೦೮ : ಅವತರಣಿಕೆ ಕೋಶ

೪೩) ಕನ್ನೂರ (ಜಿ. ಎಸ್.)
ಸುಭಾಷಿತಗಳು. ಪು : ೮೫–೮೬. ಶಿವಾನುಭವ : ೧೮, ೪. ಜನೇವರಿ ೧೯೪೪.

## ೦೦೯.೧ : ಗ್ರಂಥ ವಿಮರ್ಶೆ

೪೪) ಚಂದ್ರಶೇಖರಶಾಸ್ತ್ರಿ(ಹೊಳಲ)
ಶಿವತತ್ವರತ್ನಾಕರದ ವಿಮರ್ಶೆ. ಪು : ೯೯–೧೦೨. ಶಿವಾನುಭವ : ೫, ೪. ಜುಲೈ ೧೯೩೦ ಪುಟ : ೧೩೧–೧೩೬. ಶಿವಾನುಭವ : ೫, ೫ ಅಗಸ್ಟ ೧೯೩೦. ಪುಟ : ೧೬೬–೧೭೩. ಶಿವಾನುಭವ : ೫, ೬ ಸಪ್ಟಂಬರ ೧೯೩೦.

೪೫) ಚಂದ್ರಶೇಖರದೇವರು (ಜ.ಚ.ನಿ.)
ಭಾವಚಿಂತಾರತ್ನದ ವಿಮರ್ಶೆ. ಪು : ೨೧೨–೨೨೧. ಶಿವಾನುಭವ : ೧೩, ೬. ಮಾರ್ಚ ೧೯೩೯. ಪುಟ : ೨೫೦–೨೫೮. ಶಿವಾನುಭವ : ೧೩, ೭. ಎಪ್ರೀಲ ೧೯೩೯. ಪುಟ : ೩೨೦–೩೨೭. ಶಿವಾನುಭವ : ೧೮, ೮, ೯. ಮೇ–ಜೂನ ೧೯೩೯.

೪೬) ಪುರಾಣಿಕ (ಬುದ್ಧಯ್ಯಸ್ವಾಮಿ)
ಭಕ್ತವಿಜಯ. ಪು : ೪೩೫–೪೪೩. ಶಿವಾನುಭವ : ೧೪, ೧೦. ಜುಲೈ ೧೯೪೦. (ಮಹಿಪತರ ಗ್ರಂಥದ ವಿಮರ್ಶೆ)

೪೭) ದತ್ತಾತ್ರೇಯ. ಪು : ೫೦೧–೫೧೮. ಶಿವಾನುಭವ : ೧೪, ೧೧. ಅಗಸ್ಟ ೧೯೪೦.

೪೮) ಪುರಾಣಿಕಮಠ (ಸಿ.ಚ),
ಪ್ರಸಾದ ಸಹಸ್ರ (ಪದ್ಯರೂಪದಲ್ಲಿ ಗ್ರಂಥ ಪರಿಚಯ). ಪು : ೧೭೧–೨೦೨. ಶಿವಾನುಭವ : ೩೨, ೪. ಎಪ್ರೀಲ್ ೧೯೫೮.

೪೯) ಯಗಟಿ (ವೀರಪ್ಪ)
ವೇದಾಂತ ಸಾರ. ವೀರಶೈವ ಚಿಂತಾಮಣಿ ವಿಮರ್ಶೆ. ಪು : ೨೫–೬೨. (ನಂಜಣಾಚಾರ್ಯರ ಕೃತಿ) ಶಿವಾನುಭವ : ೩, ೯. ಮಾರ್ಚ ೧೯೨೮.

೫೦) ಶರ್ಮಾ (ಚಿದಿರೆಮಠದ ವೀರಭದ್ರ)
ಕೆಲವು ಪ್ರಮಾದಗಳು. (ಶಿವಾನುಭವದ ಲೇಖನಗಳಲ್ಲಿ ಕೆಲದೋಷ). ಪು : ೬೫–೭೦ ಶಿವಾನುಭವ : ೩, ೧೨. ಡಿಸೆಂಬರ ೧೯೨೮.

೫೧) ಶಾಂತವೀರಪ್ಪ(ಚಿ)
ವೀರಶೈವ ಧರ್ಮ ಕೈಪಿಡಿಯ ವಿಮರ್ಶೆ. (ನಂದಿಮಠರ ಗ್ರಂಥದ ವಿಮರ್ಶೆ). ಪು : ೬೬–೮೦. ಶಿವಾನುಭವ : ೧೭, ೨. ನವಂಬರ ೧೯೪೨.



೫೨) ಶಿವಾನಂದ ಸ್ವಾಮಿಗಳು (ತೆಗ್ಗಿಹಳ್ಳಿ)
ಸೀಳ್ನುಡಿಯ ವಿಮರ್ಶೆ. ಪು : ೧೩೬–೧೪೬. ಶಿವಾನುಭವ : ೩೦, ೫. ಮೇ ೧೯೫೬.

೫೩) ಹಳಕಟ್ಟಿ (ಫ.ಗು.)
ಪುಸ್ತಕ ವಿಮರ್ಶೆ. (ಮಣಿಕಾಂತಿ, ರಮಣ ಮಹರ್ಷಿ, ದುಂಬಿ, ಕನ್ನಡ ಕಲಿಸಿರುಮನ ಚರಿತೆ) ಪು : ೨೦೧–೨೦೪. ಶಿವಾನುಭವ : ೨೬, ೫, ೬. ಮೇ–ಜೂನ ೧೯೫೨.

೫೪) ಪುಸ್ತಕ ಪರಿಚಯ. (ಹರ್ಡೇಕರ ಮಂಜಪ್ಪನವರು ಬರೆದ ಲಿಂಗರಾಜರ ಚರಿತ್ರೆ) ಪು : ೨೬೯–೨೭೧. ಶಿವಾನುಭವ : ೫, ೮. ನವಂಬರ ೧೯೩೦.

೫೫) ಗ್ರಂಥವಿಮರ್ಶೆ (ಶೂನ್ಯ ಸಂಪಾದನೆ) ಪು : ೪೧೩–೪೧೬. ಶಿವಾನುಭವ : ೫, ೧೧, ೧೨. ಮಾರ್ಚ ೧೯೩೧.

೫೬) ಗ್ರಂಥವಿಮರ್ಶೆ (ಶಿವಾಗಮಗಳಲ್ಲಿ ವೀರಶೈವ ತತ್ವಜ್ಞಾನ). ಶಿವಾನುಭವ : ೩, ೯. ಮಾರ್ಚ ೧೯೨೮.

೫೭) ಪುಸ್ತಕ ವಿಮರ್ಶೆ. (ಕವಿಕರ್ಣ ರಸಾಯನ ಷಡಕ್ಷರ ದೇವ ಕೃತ). ಪು : ೩೮–೪೦. ಶಿವಾನುಭವ: ೬, ೧. ಎಪ್ರೀಲ ೧೯೩೧.

೫೮) ಗ್ರಂಥ ವಿಮರ್ಶೆ. (ಕನ್ನಡ ಲಘು ಯೋಗವಾಸಿಷ್ಟ, ವಿಜಯ ಮಹಾಂತೇಶರ ಪುರಾಣ, ಪ್ರಭುದೇವರ ಗುರುಬೋಧೆ). ಪು : ೧೦೩–೧೦೪ ಶಿವಾನುಭವ : ೬, ೨ ಜೂನ ೧೯೩೧.

೫೯) ಪುಸ್ತಕ ವಿಮರ್ಶೆ (ಹರಿಶ್ಚಂದ್ರ ಕಾವ್ಯ. ೬೩ ಪುರಾತನರು). ಪು : ೨೪೨–೨೪೪. ಶಿವಾನುಭವ : ೬, ೪. ಅಕ್ಟೋಬರ ೧೯೩೧

೬೦) ಗ್ರಂಥ ವಿಮರ್ಶೆ. (ಪ್ರಭುಲಿಂಗ ಕಂದ, ದಿ ಲೈಫ್ ಆಫ್ ಲಾರ್ಡ ಬಸವ, ವೀರೇಶ್ವರ ಶರಣರು, ತತ್ವಬೋಧಾಭ್ಯಾಸ). ಪು : ೬೩–೬೪ ಶಿವಾನುಭವ : ೭, ೧. ಎಪ್ರೀಲ ೧೯೩೨.

೬೧) ಅನುಭವ ಮಂಟಪ ವೀರಶೈವ ಧರ್ಮದ ಹೃದಯ (ಉತ್ತಂಗಿ ಚೆನ್ನಪ್ಪ ಕೃತ). ಪು : ೨೬೩–೨೭೨. ಶಿವಾನುಭವ : ೭, ೪. ಅಕ್ಟೋಬರ ೧೯೩೨.

೬೨) ಗ್ರಂಥ ವಿಮರ್ಶೆ. (ಶ್ರೀಕರ ಭಾಷ್ಯ) ಪು : ೧೭೩–೧೭೭ ಶಿವಾನುಭವ : ೧೧, ೨. ಡಿಸೆಂಬರ ೧೯೩೬.

೬೩) ಗ್ರಂಥ ವಿಮರ್ಶೆ (ಸುತ್ತೂರು ಮಠ, ಮದ್ವೀರಶೈವ ನಿಜಾಚರಣೆ) ಪು : ೨೩೮. ಶಿವಾನುಭವ : ೮, ೪. ನವಂಬರ ೧೯೩೩.

